# ಕೊರವಂಜಿ

*Koravanji*

ಜುಲೈ
೧೯೫೭



ಸಂಪಾದಕರು :
ಶ್ರೀ॥ ರಾ. ಶಿ.

ಬರಹಗಾರರು :

ಶ್ರೀ॥ ಪ್ರಸಾದ್
ಶ್ರೀ॥ ಬಚ್ಚ
ಶ್ರೀ॥ ನಾ. ಕ.
ಶ್ರೀ॥ ಹಾ. ರಾ.
ಶ್ರೀ॥ ಪಾಟೀಲಿ
ಶ್ರೀ॥ ಅ. ರಾ. ಸೇ.
ಶ್ರೀ॥ ಮು. ಸೋ. ಶರ್ಮ
ಶ್ರೀ॥ "ಕೇಫ"
ಶ್ರೀ॥ ದಾಶರಥಿ ಧೀಕ್ಷಿತ್
ಶ್ರೀ॥ ಕುಮಾರ್

ಇತ್ಯಾದಿ, ಇತ್ಯಾದಿ.

ಬಿಡಿ ಪ್ರತಿ

ನೀವು ಮೈಸೂರ್ ಬಾರ್ ಸಾಬೂನನ್ನು ಉಪಯೋಗಿಸಿದರೆ
ಬಟ್ಟೆಯನ್ನು ಬಲವಾಗಿ ಉಜ್ಜುವ ಆವಶ್ಯಕವೇ ಇಲ್ಲ.

ಅಗಸರು ಬಟ್ಟೆಗಳನ್ನು ಕಲ್ಲಿನಮೇಲೆ ಜೋರಾಗಿ ಒಗೆಯುವುದರಿಂದ
ಬಟ್ಟೆಗಳು ನಾಶವಾಗುತ್ತವೆ.

# ಮೈಸೂರು ಬಾರ್ * * * * ಸಾಬೂನಿನ

**ಹೇರಳವಾದ ನೊರೆಯು**
**ಕೊಳೆಯನ್ನು ಹೋಗಲಾಡಿಸಿ ಬಲವಾಗಿ ಉಜ್ಜುವುದನ್ನು**
**ತಪ್ಪಿಸಿ ಬಟ್ಟೆಯನ್ನು ಚೊಕ್ಕಟಮಾಡುತ್ತದೆ.**



ಮೈಸೂರು ಬಾರ್ ಸೋಪಿನ ಉಪಯೋಗದಿಂದ ಬಟ್ಟೆಗಳು
ಬಹಳ ಶುದ್ಧಿಗೊಂಡು ಪ್ರಕಾಶವಾಗುತ್ತವೆ.



# ಮೈಸೂರು ಬಾರ್ ಸೋಪನ್ನು

**ಈವತ್ತೇ ಉಪಯೋಗಿಸಿ.**

**ಗೌರ್ನಮೆಂಟ್ ಸೋಪ್ ಫ್ಯಾಕ್ಟರಿ, ಬೆಂಗಳೂರು.**

**ಒಲುಮೆಯೆನಲ್ಲನೊಡನೆ ಹಸನಾಗಿ ಬಾಳುವೆ ನಡೆಸಲು ನಿಶ್ಚಯಿಸಿದ**
**ನಾರೀಮಣಿಯ ಹೃದಯಸ್ಪರ್ಶಿ ಕಥೆ.**
**ಯಶಸ್ವಿಯಾಗಿ ನಡೆಯುತ್ತಿದೆ.**

ಬೆಂಗಳೂರು :

## ಸಾಗರ್—ಸೂಪರ್—ಶ್ರೀ ಮತ್ತು ಸ್ವಸ್ತಿಕ್

(ಸಿವಿಲ್ ಏರಿಯ)

ಮೈಸೂರು :—ಲಕ್ಷ್ಮಿ ಚಿತ್ರಮಂದಿರಗಳಲ್ಲಿ

## ದಿನವಹಿ 3 ಪ್ರದರ್ಶನಗಳು



ವೀನಸ್‌ರವರ—

# ಅಮರ ದೀಪಂ

—(ತಮಿಳು)—

**ಶಿವಾಜಿಗಣೇಶನ್—ಪದ್ಮಿನಿ—ಸಾವಿತ್ರಿ—ನಾಗಯ್ಯ—ನಂಬಿಯಾರ್**
**ತಂಗವೇಲು—ಇ. ವಿ. ಸರೋಜ ಮುಂತಾದವರು.**



| ಕಥೆ ಮತ್ತು ಸಂಭಾಷಣೆ: | ನಿರ್ದೇಶನ: | ಸ್ಟುಡಿಯೋ: |
| --- | --- | --- |
| **ಶ್ರೀಧರ್** | **ಟಿ. ಪ್ರಕಾಶ್ ರಾವ್** | **ವಾಹಿನಿ** |

## AN EMARALD RELEASE

ಶೀಘ್ರದಲ್ಲಿಯೇ ಪ್ರದರ್ಶನ ನಿರೀಕ್ಷಿಸಿ!

ವಿನೋದಾರವರ—



# ಚಿರಂಜೀವುಲು



(ತೆಲುಗು)



ತಾರಾಗಣ:

ಜಮುನ - ಬಾಲಸರಸ್ವತಿ - ಎನ್. ಟಿ. ರಾಮರಾವ್
ಸಿ. ಎಸ್. ಆರ್.



ದಿಗ್ದರ್ಶನ:

ವೇದಾಂತಂ ರಾಘವಯ್ಯ



ವಿನೋದಾರವರ—

# ಅಮರ ಗೀತಂ

—(ತಮಿಳು)—



ಹಂಚಿಕೆದಾರರು:

## VIKRAM PICTURES,

6, COTTONPET, : : BANGALORE-2.

TELEPHONE NO 2906

## ರಾಜಪ್ರಮುಖರೂ ಅರಸು ಮನೆತನದವರೂ
## ಪ್ರಜಾಕೋಟಿಯೂ ನೋಡಿ ಮೆಚ್ಚಿರುವ
## ಹಾಸ್ಯರಸಪ್ರಧಾನ ಚಿತ್ರ!

ವಿಠಲ್ ಪ್ರೊಡಕ್ಷನ್ಸ್ ರವರ

# ಮುತ್ತೈದೆ ಭಾಗ್ಯ

ಕನ್ನಡ

ನಿರ್ಮಾಪಕ ನಿರ್ದೇಶಕರು: ಬಿ. ವಿಠಲ ಆಚಾರ್ಯ

VIJAYA TALKIE

ನೀವೂ ನಿಮ್ಮ ಊರಿನ ಚಿತ್ರಮಂದಿರದಲ್ಲಿ
ನೋಡಿ ಆನಂದಿಸಿರಿ.



ಮುಂಬಯಿ ಪ್ರಾಂತ್ಯಕ್ಕೆ:

**ಶ್ರೀನಿವಾಸ ಪಿಕ್ಚರ್ಸ್, ಗದಗ.**




ಸಂಪುಟ ೧೬ ಜುಲೈ ೧೯೫೬ ಸಂಚಿಕೆ ೪

## ಕುಹಕಿಡಿಗಳು

---

ಅಖಂಡ ಕನ್ನಡ ರಾಜ್ಯ ಸ್ಥಾಪನೆಗೆ 'ಬಲಿ' ಕೊಡಲು ಸನ್ನಾಹಗಳಾಗುತ್ತಿದೆಯೆಂದು ಪತ್ರಿಕೆಗಳಲ್ಲಿ ಸುದ್ದಿ ಬಂದಿದೆ.

—"ಬಲಿ" ಕೊಡಲು ಹೋಗಿ ನಮ್ಮವರು "ಸತಿ" ಆಚರಿಸಬೇಕಾಗುತ್ತೇನೋ!!

* * *

"ರೇಷ್ಮೆ ಮುಷ್ಕರ" — "ನಿರಶನ ಸತ್ಯಾಗ್ರಹ" ಇತ್ಯಾದಿ ನಮ್ಮನೆಯಲ್ಲೇ ಹೂಡಲ್ಪಟ್ಟಿತ್ತು. ಕಾರಣ?

—ಮಗನ ಉಪನಯನಕ್ಕೆ ಹೊಸ ರೇಷ್ಮೆಸೀರೆ ತರಿಸಲೋಸುಗ!!

* * *

ರಷ್ಯಾದಲ್ಲಿನ ಏರೋಪ್ಲೇನ್ ಪ್ರಗತಿಯನ್ನು ಕಂಡು ಪಶ್ಚಿಮ ರಾಷ್ಟ್ರದವರು ಸುಸ್ತಾದರಂತೆ.

— ಹಾಗೆಂದು ರಷ್ಯಾ ಪತ್ರಿಕೆಗಳಲ್ಲಿ ಸುದ್ದಿ ಬರಲೋಸುಗ ಪಶ್ಚಿಮ ರಾಷ್ಟ್ರದ ಪ್ರತಿನಿಧಿಗಳು ಬಲು ಪ್ರಯಾಸಪಟ್ಟರಂತೆ.

* * *

ಕಲ್ಕತ್ತಾ ಆಸ್ಪತ್ರೆಯೊಂದರಲ್ಲಿ, ಆಹಾರವನ್ನು ಸರಿಯಾಗಿ ಕೊಡಲಿಲ್ಲವೆಂದು ಡಾಕ್ಟರುಗಳನ್ನು ಹಿಡಿದು ಹೇರಿದರಂತೆ ರೋಗಿಗಳು.

—ಸರಿಯಾದ ಆಹಾರ ಇಲ್ಲದೇನೇ ಹೀಗೆ ಹೇರಿದವರು, ಸರಿಯಾದ ಆಹಾರ ಕೊಟ್ಟಿದ್ದಿದ್ದರೆ ಖೂನಿಯನ್ನೇ ಮಾಡಿಬಿಡುತ್ತಿದ್ದರೇನೋ!

* * *

ಪಾಕೀಸ್ಥಾನದಲ್ಲಿ ವಿಳ್ಳೇದೆಲೆಗೆ ಬಲು ಗಿರಾಕಿಯಿದೆಯಂತೆ.

—ಇರಲೇಬೇಕು! ಎಲಡಿಕೆ ಅಗಿದರೆ ಆ ಭಾಷೆಯಾಡಲು ಬಲು ಚೆನ್ನು!!

* * *

ಆತ ಕೊಳಲು ಕಚೇರಿ ಮಾಡಿದಾಗ, ಹಾವುಗಳು ಒಮ್ಮೆ ಹುತ್ತವನ್ನು ಬಿಟ್ಟು ಬಂದು ಹೆಡೆಯಾಡಿಸುತ್ತಾ ಕುಳಿತಿದ್ದುವಂತೆ.

—ಆದೇನು ಮಹಾ! ನಮ್ಮ ವೆಂಕಟಲಕ್ಷ್ಮಿ ಹಾರ್ಮೋನಿಯಂ ಬಾರಿಸಲು ಶುರುಮಾಡಿದಾಗ, ಅಕ್ಕಪಕ್ಕದ ಮನೆಯವರು ಸ್ವಂತ ಮನೆಗಳನ್ನೇ ಬಿಟ್ಟು ಹೊರಟು ಹೋದರು.

* * *

ಅಸ್ಪೃಶ್ಯತಾ ನಿವಾರಣಾ ಕಚೇರಿಯಲ್ಲಾದರೂ ನಮಗೆ ಕೆಲಸ ಕೊಡಿ ಎಂದು ಮುಂದೆ ಬಿದ್ದ ಕೋಮಿನವರು ಕೇಳಿಕೊಂಡಿದ್ದಾರೆಂಬುದು ಖಚಿತವಲ್ಲವಂತೆ.

* * *

ಸಂಯುಕ್ತ ಅಮೇರಿಕಾ ರಾಷ್ಟ್ರದ ಪಾರ್ಲಿಮೆಂಟಿನಲ್ಲಿ ಪಾಕೀಸ್ಥಾನಕ್ಕೂ ಪ್ರಾತಿನಿಧ್ಯ ಬೇಕು ಎಂದು ಇನ್ನೂ ಕೇಳಿಲ್ಲವಂತೆ

* * *

ಆರೋಗ್ಯ ಸಚಿವರು ಆರೋಗ್ಯ ನಿಮಿತ್ತ ಅಮೇರಿಕಾಕ್ಕೆ ತೆರಳಿದ್ದಾರಂತೆ.

—ಈಗ ಕ್ಷೇಮ ಎಲ್ಲರಿಗೂ.

* * *

ಶ್ರೀ ದೇಶಮುಖರು ದೆಹಲಿಯನ್ನು ಬಿಟ್ಟು ಮದರಾಸಿಗೆ ಬಂದಿದ್ದಾಗ ಮೃಗಾಲಯಕ್ಕೆ ಭೇಟಿ ಇತ್ತರಂತೆ.

—ಲೋಕಸಭೆಯಿಲ್ಲದೆ ಬಿಕೋ ಎನ್ನಿಸಿರಬೇಕು – ಪಾಪ!

* * *

ಮೀನು ಹಿಡಿಯುವ ಕೈಗಾರಿಕೆಯನ್ನು ಕಲಿಯಲು ಚೀನಾದೇಶಕ್ಕೆ ನಾಯಕರೊಬ್ಬರು ಹೋಗಿಬರುತ್ತಾರಂತೆ.

— ಗಾಳ ಹಾಕದೆ ಮೀನು ಹಿಡಿಯುವ ಕೈಗಾರಿಕೆಯನ್ನು ನಮ್ಮ ನಾಯಕರು ಚೆನ್ನಾಗಿ ತಿಳಿದಿದ್ದಾರೆ ಎಂದುಕೊಂಡಿದ್ದೆವು.

---

# ಉರಿಗಾಳು

ತುಂಗಭದ್ರಾ ನದಿಯ ನೀರಲ್ಲಿ ಆಂಧ್ರಕ್ಕೆ ಶೇಕಡ ೬೫ರಷ್ಟು, ಮೈಸೂರಿಗೆ ಉಳಿದ ೩೫ರಷ್ಟು ಎಂದು ಒಪ್ಪಂದವಾಗಿದೆ.... ಇಬ್ಬರ ದಾಹವೂ ಇನ್ನೂ ಅಡಗಿಲ್ಲ ವಂತೆ.

* *

ಬೊಂಬಾಯಿ ಮುಖ್ಯವೋ, ದೇಶ ಮುಖ್ಯವೋ, ಎಂಬ ಪ್ರಶ್ನೆಗೆ ದೇಶಮುಖರು ರಾಜಿನಾಮೆ ಇತ್ತು, ಬೊಂಬಾಯಿ ಮುಖ್ಯ ಎಂದು ಉತ್ತರಿಸಿದಾರೆ.

* * *

ಪಾಕಿಸ್ಥಾನದಲ್ಲಿ ಮಿಶ್ರ ಸರ್ಕಾರ ಸ್ಥಾಪನೆಯಾಗಲಿದೆ....(ಸುದ್ದಿ) ಎಣ್ಣೆ ಶೀಗೆ ಕಾಯಿ ಮಿಶ್ರವಾಗುತ್ತದೆಯೆ?

* * *

ನಮ್ಮ ದೇಶದ ಹಲವು ಪತ್ರಿಕೆಗಳು ವಿದೇಶದವರಿಂದ ಹಣ ಪಡೆದು ಒಡಕುಂಟು ಮಾಡುವ ಕಾರ್ಯಕ್ರಮ ಕೈಗೊಂಡಿವೆ, ಎಂದು ನೆಹರು ಅವರು ಘೋಷಿಸಿದಾರೆ.... ಇದನ್ನು ಕೇಳಿ, ಅನೇಕ ಪತ್ರಿಕಾಕರ್ತರು ಆ ದೇಶಗಳ ಹೆಸರು ವಿಳಾಸಗಳಿಗಾಗಿ ನೆಹರು ಅವರನ್ನು ಕಾಡಿಸಲು ಮೊದಲುಮಾಡಿವೆ.

* * *

ಭಾರತದ ಉಪಾಧ್ಯಕ್ಷ ಡಾ|| ರಾಧಾಕೃಷ್ಣನ್‌ರವರು ಲೆನಿನ್ ಸ್ಟಾಲಿನ್ ಸಮಾಧಿಗಳಮೇಲೆ ಪುಷ್ಪದಂಡೆಯನ್ನಿಟ್ಟರು (ಸುದ್ದಿ)....'ಸಮಾಧಿ'ಗಳು ಬಹುವಚನ ಪುಷ್ಪದಂಡೆ, ಏಕವಚನ; ಒಟ್ಟಿನಲ್ಲಿ ಬುಲ್ಗಾನಿನ್ ಕ್ರುಶ್ಚೆವ್ ವಚನ.

* * *

ಕನ್ನಡ ಸಾಹಿತ್ಯ ಪರಿಷತ್ತು ಏನು ಮಾಡುತ್ತಿದೆ, ಏನು ಮಾಡಲಿಲ್ಲ, ಏನು ಮಾಡಬೇಕಾಗಿದೆ, ಎಂಬ ವಿಷಯವಾಗಿ ಪತ್ರಿಕೆಗಳಲ್ಲಿ ಚರ್ಚೆ ನಡೆದಿದೆ........ಇನ್ನು ಮುಂದೆ, ಕನ್ನಡ ಸಾಹಿತ್ಯ ಏನು ಮಾಡುತ್ತಿದೆ, ಏನು ಮಾಡಲಿಲ್ಲ, ಏನು ಮಾಡ ಬೇಕಾಗಿದೆ, ಎಂದು ಚರ್ಚಿಸಲಿ.

* * *

ಹಲವು ಪ್ರದೇಶ ಮಂತ್ರಿಗಳು ತಮ್ಮ ಕೆಲಸಕ್ಕೆ ರಾಜಿನಾಮೆ ಇತ್ತು, ಭೂದಾನ ಚಳುವಳಿಗೆ ಸೇರುತ್ತಲಿದಾರೆ.... ...ಹಾಗಾದರೆ, ಈ ಚಳುವಳಿಯಿಂದ ಪ್ರಯೋಜನ ವುಂಟು ಎಂದು ಒಪ್ಪಬೇಕಾಗಿದೆ.

* * *

ಹಳೆಯ ವಸ್ತ್ರಗಳನ್ನು ಕಳಚಿ ಬಿಸಾಕುವಂತೆ, ನಾನು ಈ ಮಂತ್ರಿಪದವಿಯನ್ನು ತ್ಯಜಿಸಲು ಸಿದ್ಧ ಶ್ರೀ ಕಾಮರಾಜನಾಡಾರ್)........ಅನೇಕರಿಗೆ ಈ ಖದ್ದರ್ ಬಟ್ಟೆ ಆಗಬೇ ಒರಟೆನಿಸಿದೆ.

* * *

ರೈಲ್ವೆ ನೌಕರರಿಗಾಗಿ ಮೊದಲನೆಯ ಪಂಚವಾರ್ಷಿಕಯೋಜನೆ ಕಾಲದಲ್ಲಿ ನಲವತ್ತು ಸಹಸ್ರ ಮನೆಗಳನ್ನು ಕಟ್ಟಲಾಯಿತು (ಸುದ್ದಿ) .... ಆದರೂ, ಅವರು ಫ್ರೀ ಪಾಸುಗಳನ್ನು ಹಿಡಿದು ಊರೂರು ತಿರುಗುತ್ತಿದಾರೆ.

* * *

ಖಾನ್ ಬಹದ್ದೂರ್ ಅಬ್ದುಲ್ ಗಫಾರ್‌ಖಾನರನ್ನು ಯಾವ ಜೆಯಿಲಲ್ಲಿ ಬಂಧಿಸುತ್ತಾರೆಂಬುದು ಇನ್ನೂ ನಿರ್ಧರವಾಗಿಲ್ಲ...ಅಂಥ ಮಹಾತ್ಮರನ್ನು ಹಿಡಿಸುವ ಜೆಯಿಲು ಅಲ್ಲೆಲ್ಲಿದೆ?

* * *

ನಾಳೆ ರಾಜಾಜಿ ಯಾವುದನ್ನು ಪ್ರತಿಭಟಿಸುತ್ತಾರೆ, ಎಂಬುದು ತಿಳಿಯದಾಗಿದೆ (ಪತ್ರಿಕೆ) ...ಇಂದು ಯಾವುದನ್ನು ನಿರ್ಧರಿಸುತ್ತೇವೆಯೋ, ಅದನ್ನ ನಾಳೆ ಪ್ರತಿಭಟಿಸು ವುದೇ ಅವರ ಈಗಿನ ಚಾಳಿ.

* * *

---

ನಾಗಾ ಪ್ರಾಂತ್ಯಕ್ಕೆ ಪಂತ್‌ರವರು ಭೇಟಿ ಕೊಡುತ್ತಾರಂತೆ.

—ನಾಗಾಜನರಲ್ಲಿ ಮಿಾಶೆಯನ್ನು ಬೆಳೆಸುವ ವಾಡಿಕೆಯಿಲ್ಲವಂತೆ.

* * *

# ಕೊರವಾವಲೋಕನ

ಹಾಲು ಚೆಲ್ಲಿದಹಾಗೆ ಬೆಳದಿಂಗಳು. ಕ್ಲಬ್ಬಿನ ಹುಲ್ಲಾವಲಿನಲ್ಲಿ ಆ ಬೆಳದಿಂಗಳಲ್ಲಿ ಕುಳಿತಿದ್ದ ಕೊರವ. ಸುತ್ತಲೂ ನೋಡಿದ. ಎತ್ತೆತ್ತಲೂ ನೋಡಿದ ಅನತಿದೂರದಲ್ಲೇ ಒಂದು ಮೇಜಿನಬಳಿ ಒಂದು ಜೋಡಿ ಕುಳಿತು ಕೇಕೆಹಾಕುತ್ತಿತ್ತು. ಅತ್ತ ಇನ್ನೊಂದು ನಾಲ್ಕುಜೋಡಿ ನಗೆಯ ಹೊಳೆಯ ಮೇಲೇರಿ ಹಾಯುತ್ತಿತ್ತು. ಕಾಲಿನ ಬೂಡ್ಸು ಕಾಲಿನ ಚಪ್ಪಲಿಗೆ ಮೇಜಿನ ನೆರಳಲ್ಲಿ ತಾಳಹಾಕುತ್ತಿತ್ತು. ಇತ್ತ ಇನ್ನೊಂದೆಡೆ, ಇನ್ನೆರಡು ಜೋಡಿ ವೇದಾಂತದ ಮಾತಾಡುವ ಅಮಲಿನಲ್ಲಿ ಮುಳುಗಿದ್ದವು. ಆ ಬೆರಳಿಗೆ ಈ ಬೆರಳು ಸೋಂಕಿದಾಗ ವೇದಾಂತದ ಮಾತುಗಳು ಆಧ್ಯಾತ್ಮಿಕದ ಪರ ಮಾವಧಿಯನ್ನು ಮುಟ್ಟುತ್ತಿತ್ತು.

—ವೈಶಾಖ ಶುದ್ಧ ಪೌರ್ಣಮಿ ನಿರ್ವಾಣ ಬಯಸಿದಾತನಿಗೆ ಸಿದ್ಧಿಯಾದ ಬೆಳದಿಂಗಳು—

ಕೊರವ ಅತ್ತಿತ್ತ ನೋಡದೆ, ಎತ್ತಲೋ ಎಲ್ಲೋ ಇರುವ ಮರದ ನೆರಳನ್ನು ಕಂಡು ಒಬ್ಬನೇ ಕುಳಿತು, ತೊಡೆಯ ಮೇಲೆ "ಮೆನು ಕಾರ್ಡ್" ಇಟ್ಟುಕೊಂಡು ತನಗೆ ತೋಚಿದುದನ್ನು ಬರೆಯುತ್ತಿದ್ದಾನೆ—ಅರಣ್ಯಕವನ.

ಹೈರಾವಣ ಮೈರಾವಣರು ಬಿಕಿನಿ ಅತೋಲ್, ಸೈಬೀರಿಯಾದಲ್ಲಿ ತಮ್ಮ ತಪಸ್ಸನ್ನು ನಿರ್ವಿಘ್ನವಾಗಿ ಆಚರಿಸುತ್ತಿದ್ದಾರೆ. ಪೂರ್ಣ ಫಲಾಪೇಕ್ಷೆಯಿಂದ ತಪಸ್ವಿಗಳಾಗಿದ್ದಾರೆ!!

ವಿಶ್ವಜೀವನದ ವಿರಾಟ್‌ಸ್ವರೂಪದ ಪೂರ್ಣದರ್ಶನವನ್ನು ಮಸುಕು ಮಸುಕಾಗಿ ಯಾದರೂ ಕಂಡ ಒಬ್ಬಾತ ಈ ತಪಸ್ಸು ಬೇಡ ಇದು ತಪ್ಪು ಎಂದು ಗಂಟಲುಶೋಷಣೆ ಮಾಡಿಕೊಳ್ಳುತ್ತಿದ್ದಾನೆ—ಕೊರವನಂತೆ ಅರಣ್ಯಕವನವನ್ನೂ ರೋಧಿಸುತ್ತಿದ್ದಾನೆ—

– ಎಂದು ಕೊರವ ನನಗೆ ಹೇಳಿದ ಆ ಬೆಳದಿಂಗಳ ಹುಲ್ಲಾವಲಿನಲ್ಲಿ ಆ ರಾತ್ರಿ —ಆ ಕ್ಲಬ್ಬಿನಲ್ಲಿ!!!

* * *

ಶುಕ್ರವಾರ ನನಗೆ ಬಲು ಖುಷಿ. ಅವತ್ತು ಮಧ್ಯಾಹ್ನ ನಮ್ಮ ತಾಯಿಯ ಚಿನ್ನದ ಡಾಬನ್ನು ನನಗೆ ಕೊಟ್ಟು ಸನ್ನಾಕೆ, "ಅಂದ್ರೇ ಈಗಿನ ಕಾಲವಲ್ಲಿ ಯಾರೂ

ಇಂತಹ ಬುಗುಡಿ ಕಟ್ಟಿದ ಡಾಬನ್ನು ಉಪಯೋಗಿಸುವುದಿಲ್ಲ. ನಾಲ್ವತ್ತುವರ್ಷಗಳ ಹಿಂದೆ ಸ್ವರ್ಗವನ್ನೈದಿದ ನಿಮ್ಮ ತಾಯಿಯ ಹಂಬಲಕ್ಕಾಗಿ ಇದನ್ನು ಇಟ್ಟಿದ್ದೇನೆ. ಇನ್ನುಮೇಲೆ ನಾನು ಇದನ್ನು ಹಾಕಿಕೊಳ್ಳುವಂತೆ ಇಲ್ಲ. ಇದನ್ನು ಮಾರಿಬಿಟ್ಟು ಯಾವುದಾದರೂ ಪ್ರಯೋಜನವಾಗುವಂತಹ ಒಡವೆ ಮಾಡಿಸಿಬಿಡಿ ಅಂದರೆ! ಏನಿಲ್ಲ ಅಂದರೂ ಮುನ್ನೂರು ರೂಪಾಯಿಗೆ ಮಾರಬಹುದು" ಎಂದಿದ್ದಳು. ನಾನು ಮಾರಿದಾಗ ಐನೂರು ಸಿಕ್ಕಿತು ಅಂದಮೇಲೆ ಕ್ಲಬ್ಬಿನಸಾಲ ಇನ್ನೂರು ತೀರಿಸಿದರೂ ಆಕೆಯ ಕೈಲಿ ಮುನ್ನೂರು ರೂಪಾಯಿಗಳನ್ನು ಮಾತಾಡದೆ ಮುಗುಮ್ಮಾಗಿಟ್ಟರೆ ನನ್ನ ಜೀವನ ಸಂತಸ ಮಯ. ಅದಕ್ಕೇ ಖುಷಿ.

ಶುಕ್ರವಾರ ಕ್ಲಬ್ಬಿಗೆ, ಮಾವನಮನೆ ಮೊದಲ ದೀಪಾವಳಿ ಅಳಿಯನಂತೆ ಹೋದೆ. ಆದರೆ ಅಲ್ಲಿದ್ದವ ಕೊರವನೊಬ್ಬನೇ! ಆ ದಿನ ಊರಲ್ಲಿ ಕುದುರೆಜೂಜು. ಕೊರವನನ್ನೇ ಗಂಟು ಹಾಕಿಕೊಂಡು ನನ್ನ ಸುಖವನ್ನು ಅವನಲ್ಲೇ ತೋಡಿಕೊಂಡೆ.

"ಈಗಿನ ಕಾಲದಲ್ಲಿ ಚಿನ್ನ ಮಾರೋದುಂಟೇನೋ!" ಎಂದ ಕೊರವ.

"ಅರೆ ಈಗ ಚಿನ್ನ ತೊಲಕ್ಕೆ ನೂರಾಗಿದೆ ಕಣೋ! ಇನ್ನುಮೇಲೆ ಚಿನ್ನದ ಗಣಿಯೇ ನಮ್ಮದಾಗುತ್ತೆ ಕಣೋ! ಅಂದಮೇಲೆ ಚಿನ್ನದ ಬೆಲೆ ಕೃಷ್ಣಪಕ್ಷದ ಚಂದ್ರನಂತೆ ಕೃಷವಾಗಿ ಹೋಗುತ್ತೆ ಕಣಯ್ಯಾ! ಅತ್ತೆಮನೆ ಸೊಸೆಯಂತೆ ಬಳಲಿ ಬೆಂಡಾಗುತ್ತೆ ಕಣಯ್ಯಾ!" ಎಂದು ನಾಡಗೀತೆಯನ್ನೇ ಪ್ರಾರಂಭಿಸಿದೆ.

"ಬೇರರ್" ಎಂದು ಬೊಬ್ಬೆ ಹಾಕಿದ ಕೊರವ. ಅಂಗಲಾಚಿದರೂ ಯಾರೂ ಬಾರದ ಆ ಕ್ಲಬ್ಬಿನಲ್ಲಿ ಆ ಬೊಬ್ಬೆಗೆ ಬೆದರಿ ನಾಲ್ಕುಜನ ಬೇರರುಗಳು ಓಡಿಬಂದು ಸುತ್ತಲೂ ನಿಂತರು.

"ಬರಫ್ ಲಾವ್" ಎಂದು ಆಣತಿಯಿತ್ತ ಕೊರವ.

ಒಂದೇ ನಿಮಿಷದಲ್ಲಿ ನಾಲ್ವರು ಬೇರರುಗಳೂ "ಬರಫ್" ತಂದರು. ಅಷ್ಟನ್ನೂ ನನ್ನ ತಲೆಯಮೇಲೆ ತನ್ನ ಕರ್ಚೀಫಿನಲ್ಲಿ ಕಟ್ಟಿ, ಇಟ್ಟ. "ಮಗೂ! ಕೇಳು" ಎಂದು ಭಾಷಣಕ್ಕೆ ತೊಡಗಿದ ಕೊರವ.

"ಚಿನ್ನದ ಗಣಿಗಳೇನೊ ನಮ್ಮದೇ ಆಗುತ್ತೆ ಆಗಬಹುದು!! ಆದರೆ ಆ ಕಾರಣದಿಂದಲೇ ಚಿನ್ನದ ಬೆಲೆ ಒಂದಕ್ಕೆ ಮೂರಾಗುತ್ತೆ. ಇನ್ನು ಮೇಲೆ ಮಾವನಮನೆ ಅಳಿಯನಂತೆ ಚಿನ್ನದಗಣಿಯ ದರ್ಬಾರ್ ನಡೆಯುತ್ತೆ. ಅಂದಮೇಲೆ ಈಗಿನ ನೂರು ರೂಪಾಯಿ ಬೆಲೆ ಮುನ್ನೂರು ಆಗಲೇಬೇಕು. ಇದು ಕಂಡೂ ಕಂಡೂ ಇದ್ದ ಅಪರಂಜಿ ಚಿನ್ನವನ್ನು ಇಷ್ಟು ಅಗ್ಗವಾಗಿ ಮಾರಿದೆಯಲ್ಲೋ ಬಕರಾ!"

"ಬಿಡೋ ಬಿಡೋ ಕೊರವಾ! ಚಿನ್ನದ ಗಣಿ ನಮ್ಮದೇ ಆದರೆ, ನಾವೇ ಅದನ್ನು ನಡಿಸಿದರೆ ಚಿನ್ನದ ಬೆಲೆ ಬಿದ್ದೇ ಹೋಗುತ್ತೆ" ಎಂದೆ ನಾನು.

"ಏನೋಪ್ಪಾ! ಹಾಗೂ ಆಗಬಹುದು" ಎಂದ ಕೊರವ ದೈನ್ಯದ ದನಿಯಲ್ಲಿ ಸೋಲಿನ ಧಾಟಿಯಲ್ಲಿ.

ನಾನು ಅಹಂಕರಿಸುವ ರೀತಿ ನಕ್ಕೆ. ರೇಗಿದ ಕೊರವ ಸೇರಿಸಿದ.

"ಹಾಗೂ ಆಗಬಹುದು! ಆದರೆ? ಯಾವಾಗ ಗೊತ್ತೆ? ದುಡಿದ ಮಾವನ ಮನೆಯಲ್ಲಿ ಬೊಗಳೆ ಅಳಿಯ, ಮಾವನಿಗಿಂತ ಹೆಚ್ಚು ಹುಷಾರಾದಾಗ, ಹೆಚ್ಚು ಜಾಣನಾದಾಗ. ಇದು ಆದಾಗ ನೋಡು ಚಂದ್ರ ಸುಡುತ್ತಾನೆ. ಸೂರ್ಯ ತಂಪಾಗುತ್ತಾನೆ. ಕವಿ ಬರೆಯುವ ಬದಲು ಜೀವಿಸುತ್ತಾನೆ. ರಾಜಕಾರಣಿ ಮಾತಾಡುವ ಬದಲು ಕೆಲಸಮಾಡುತ್ತಾನೆ ಹಾಗಾದಾಗ ನಿನಗೂ ಬುದ್ಧಿ ಬರುತ್ತೆ-- ನೀನೂ ನಿನ್ನ ಹೆಂಡತಿಯ ಸಲಹೆಗೆ ಕೋಲೇ ಬಸವನಾಗುವುದಿಲ್ಲ" ಎಂದೇಬಿಟ್ಟ.

ಸುಸ್ತಾದೆ ನಾನು—ಅಲ್ಲಿ ಆ ಅಮ್ಮನ ಕಾಟ—ಇಲ್ಲಿ ಈ ಗುಮ್ಮನಕಾಟ!

---



# ಬೊಂಬಾಯಿನಿಂದ ಬಂದ ಶಂಕರು ಕಾಗದ

ಕ್ಷೇಮ ಶ್ರೀ ಬೊಂಬಾಯಿ

12-6-56

ಮಾ|| ಅಜ್ಜಿಗೆ ಬಾಲಕನು ಮಾಡುವ ಸಾಷ್ಟಾಂಗ ನಮಸ್ಕಾರಗಳು. ಇಲ್ಲಿ ಎಲ್ಲರೂ ಕ್ಷೇಮ. ಅಲ್ಲಿ ನಿಮ್ಮಗಳ ಕ್ಷಾಮಕ್ಕೆ ಕಾಗದ ಬರೆಸುವುದು

ನಿನಗೊಂದು ಸಂತೋಷ ಸಮಾಚಾರ. ಸರೋಜ ಇಲ್ಲಿಗೆ ಬರುವಾಗ ನೀನು ಹೂಬತ್ತಿ, ಗೆಜ್ಜೆಸ್ತ್ರ ಕಳುಹಿಸಿದ್ದೆಯಲ್ಲ, ಅದನ್ನು ಇಲ್ಲಿ ಗೃಹಕೈಗಾರಿಕೆ ಮತ್ತು ಕಲೆಯ ಪ್ರದರ್ಶನಕ್ಕೆ ಕಳುಹಿಸಿದ್ದೆವು. ನೀನು ಮಾಡಿದ್ದ ಹೂಬತ್ತಿಗೆ ರಾಷ್ಟ್ರಾಧ್ಯಕ್ಷರ ಬಹುಮಾನ ಸಿಕ್ಕಿದೆ. ಪೇಪರಿನಲ್ಲಿ ಹಾಕುವುದಕ್ಕೆ ನಿನ್ನ ಫೋಟೋ ಕೇಳಿದರು. ನಾನು ನನ್ನ ಡಬ್ಬದಿಂದ ನಿನ್ನ ಫೋಟೋ ತೆಗೆದುಕೊಳ್ಳುತ್ತಿದ್ದಾಗ ನೀನು ಎಷ್ಟೊಂದು ರಂಪಮಾಡಿ ಕೊನೆಗೂ ನಿನ್ನ ಹಠ ಸಾಧಿಸಿಕೊಂಡೆ ಎಂದು ಪೇಪರಿನವರಿಗೆ ಹೇಳಿದೆ. ಆದರೆ ಈ ಭಾನುವಾರದ ಪೇಪರಿನಲ್ಲಿ "ಸುದ್ದಿಯಲ್ಲಿರುವ ಜನರು" ಎನ್ನುವ ವಿಭಾಗದಲ್ಲಿ ನಾನು ಹೇಳಿದುದನ್ನೇ ಬರೆದುಬಿಟ್ಟಿದ್ದಾರೆ ನೀನು ನಿನ್ನ ಅಜ್ಜಿಯಿಂದ ಹೂಬತ್ತಿ ಮಾಡುವುದನ್ನು ಹೇಗೆ ಕಲಿತೆ ಎಂದು ಕೇಳಿದರು. ಅವತ್ತು ರಾತ್ರಿ ನೀನು ಹೇಳಿದ್ದೆಯಲ್ಲ, ಅದನ್ನು ಅವರಿಗೆ ಹೇಳಿದೆ. ಅದೂ ಎಲ್ಲಾ ಪೇಪರಿನಲ್ಲಿ ಬಂದಿದೆ.

"ಜಹಾಂಗೀರ್ ಆರ್ಟ್ ಗ್ಯಾಲರಿ'ಯಲ್ಲಿ ಪ್ರದರ್ಶನ ನಡೆಯಿತು. ಎದುರುಗಡೆ ಗೋಡೆಯ ಮಧ್ಯದಲ್ಲಿ, ಎತ್ತರವಾದ ಗಾಜಿನ ಚೌಕಟ್ಟಿನೆಯ ಕಂಬದಮೇಲೆ, ಮಕಮಲ್ಲಿನ ಬಟ್ಟೆಯೊಂದನ್ನು ಹಾಸಿ, ನೀಲಿ ರೇಷ್ಮೆಯ ಪರದೆ ಮುಂದೆ ನಿನ್ನ ಹೂಬತ್ತಿಗಳನ್ನು ಸಾಲಾಗಿ ನಿಲ್ಲಿಸಿದ್ದರು. ಪ್ರದರ್ಶನವನ್ನು ಉದ್ಘಾಟನೆ ಮಾಡಿದ ಶ್ರೀ||.... ಅವರು ಒಂದುಕ್ಷಣ ಅದರಮುಂದೆ ಬೆರಗಾಗಿ ನಿಂತುಬಿಟ್ಟರು. ಅವರು ತಾವು ಮಾಡಿದ ಭಾಷಣದಲ್ಲಿ "ನಮ್ಮ ಭಾರತದ ಪ್ರಾಚೀನ ಸಂಸ್ಕೃತಿಯು ಇನ್ನೂ ಅಚ್ಚಳಿಯದೆ ನಿಂತಿದೆ ಎನ್ನುವುದಕ್ಕೆ ಈ ಹೂಬತ್ತಿಗಳೇ ಸಾಕ್ಷಿ. ಇದರ ನೋಟ ಇತಿಹಾಸದ ಅನೇಕ ಸುವರ್ಣ ಅಧ್ಯಾಯಗಳನ್ನು ನೆನಪಿಗೆ ತರುತ್ತದೆ ನಮ್ಮ ಸರಕಾರದವರು ಈ ಕಲೆ ನಾಶವಾಗದಿರುವಂತೆ ಏರ್ಪಾಡುಗಳನ್ನು ಮಾಡುವುದಕ್ಕಾಗಿ ಈಗಾಗಲೇ ವಿಶೇಷ ಸಮಿತಿಯೊಂದನ್ನು ರಚಿಸಿದ್ದಾರೆ...." ಎಂದು ಹೇಳಿದರು.

ಚೀನಾ, ರಷ್ಯಾದೇಶದ ರಾಯಭಾರಿಗಳೂ ಕೂಡ ಪ್ರದರ್ಶನಕ್ಕೆ ಬಂದಿದ್ದರು. ಚೀನಾದೇಶದ ರಾಯಭಾರಿಗಳು "ಇಂತಹ ಅತ್ಯುತ್ತಮ ಕಲೆಗಾರರ ನಿಯೋಗವೊಂದು ಚೀನಾಕ್ಕೆ ಬರಬೇಕು. ಈಗಾಗಲೇ 'ಪಂಚಶೀಲ'ಗಳ ಮೂಲಕ ಹತ್ತಿರ ಬಂದಿರುವ ಚೀನಾ, ಭಾರತಗಳು ಇದರಿಂದಾಗಿ ಇನ್ನೂ ಹತ್ತಿರ ಬರಲು ಸಾಧ್ಯವಾಗುತ್ತದೆ" ಎಂದು ಹೇಳಿದರು. ರಷ್ಯಾದ ರಾಯಭಾರಿಗಳು "ಬಂಡವಾಳಶಾಹಿಗಳ ತುಳಿತಕ್ಕೆ ಜಗ್ಗದೆ ಇಂತಹ ಉತ್ತಮ ಕಲೆಗಾರಿಕೆಯನ್ನು ಬೆಳೆಸಿಕೊಂಡು ಬಂದಿರುವ ಭಾರತದ ಜನಕ್ಕೆ ರಷ್ಯಾದ ಜನತೆ ತನ್ನ ಅಭಿನಂದನೆಗಳನ್ನು ಕೋರುತ್ತದೆ" ಎಂದು ತಮ್ಮ ಭಾಷಣದಲ್ಲಿ ಹೇಳಿದರು. ಅನೇಕ ಪೇಪರಿನವರು ಮಾನ್ಯ ಸಚಿವ ಶ್ರೀ||....ಅವರು ಹೂಬತ್ತಿಯ ಪಕ್ಕದಲ್ಲಿ ನಿಂತಿರುವ ಫೋಟೋವನ್ನು ತೆಗೆದುಕೊಂಡರು

ಮುಂದಿನ ಸಾರಿ ಅಂತರರಾಷ್ಟ್ರೀಯ ಅಡಿಗೆಯ ಸ್ಪರ್ಧೆ ನಡೆಯುತ್ತದೆಯಂತೆ. ನೀನು ಕೋಡುಬಳೆ, ಹುರಿಗಾಳನ್ನು ಕಳುಹಿಸುವುದನ್ನು ಮಾತ್ರ ಮರೆಯಬೇಡ. ಅವಕ್ಕೆ ಚಿನ್ನದ ಪದಕ ಸಿಕ್ಕುತ್ತದೆಯೆನ್ನುವುದರಲ್ಲಿ ನನಗೆ ಏನೇನೂ ಸಂದೇಹವಿಲ್ಲ.

ಇನ್ನೇನೂ ವಿಶೇಷವಿಲ್ಲ.

ಇತಿ ಸರೋಜನ ಮತ್ತು ನನ್ನ ನಮಸ್ಕಾರಗಳು.
ಶಂಕರು.

---

**ಹಾದಿಯಲ್ಲಿ ಕೇಳಿಸಿದುದು—**

"ಇನ್ನು ಮೇಲೆ ನಮ್ಮ ಹುಡುಗರ ಇಂಗ್ಲೀಷು ಮಟ್ಟ ಇಳಿದಿದೆ ಅಂತ ದೂರ ಬೇಕಾಗಿಲ್ರೀ – ಇಂಗ್ಲೀಷಿಗೇ ಮಟ್ಟಾ ಆಗ್ಹೋಗುತ್ತೆ!"

**ವೈದ್ಯರಲ್ಲಿ ವಿಷನಿಮಿಷಗಳು—**

ಹಾಗಾದ್ರೇ—ಡಾಕ್ಟ್ರೇ—ನನ್ನ ಮೈಗೆ ಆಗದೇ ಇರೋ ತಿಂಡಿಗಳನ್ನ ತಿನ್ನೋಕೆ ಇನ್ನೂ ಎಷ್ಟು ದಿನ ಬೇಕಾಗುತ್ತೆ?"

# ಪರಶುರಾಮ

ಶ್ರೀವರ್ಮಾ ಪರಶುರಾಮ್‌ರವರು ಆ ಕಾಲೇಜಿನ ಹಿರಿಯ ಅಧ್ಯಾಪಕರು. ಆ ಕಾಲೇಜಿನಲ್ಲಿ 'ಸೀಟು' ದೊರಕಬೇಕಾದರೆ ಬಹಳ ಪ್ರಯಾಸಪಡಬೇಕಾಗಿತ್ತು. ಹಳ್ಳಿ ಹಳ್ಳಿಗಳಿಂದ, ಕೇರಿ ಕೇರಿಗಳಿಂದ, ಗ್ರಾಮ ಗ್ರಾಮಗಳಿಂದ, ಊರು ಊರುಗಳಿಂದ ವಿದ್ಯಾರ್ಥಿಗಳು ಆತನ ಕಾಲೇಜಿನಲ್ಲಿ ಕಲಿಯಲು ಬರುತ್ತಿದ್ದರು.

ಕರ್ಣ ಒಬ್ಬ ಹುಡುಗ, ಗಂಗಕುಲದವರ ಮನೆಯಿಂದ ವಿದ್ಯಾಭ್ಯಾಸಕ್ಕಾಗಿ ಬಂದವ. ಕಾಲೇಜಿನ ಹತ್ತಿರವೇ ಮೂರು ದಿನ ಸುಳಿದಾಡುತ್ತಿದ್ದ ಇವನಂತೆಯೇ ಬಂದಿದ್ದ ವಿದ್ಯಾರ್ಥಿಗಳೊಡನೆ ಮಾತುಕತೆಯಾಡಿ ವಿಷಯ ಸಂಗ್ರಹಿಸಿದ.

ಒಬ್ಬ ಹುಡುಗ ಹೇಳಿದ "ನೋಡ್ರಪಾ! ನಮ್ಮ ಊರಾಗಿನವನೇ ಹೋದಬಾರಿ ಇಲ್ಲಿಗೆ 'ಭೇಟಿ'ಗಾಗಿ ಬಂದಿದ್ದ. ಚಲೋ ಹುಡುಗ, ಎಳಕವಿಾಸೆ, ಇಂಟರ್‌ವ್ಯೂ ಸಮಿತಿಯಲ್ಲಿದ್ದ ಒಬ್ಬ ಹಿರಿಯಾತ ಇವ ತನ್ನ ಮಗಳಿಗೆ ಸರಿಯಾದ ವರ ಎಂದು ಯೋಚಿಸಿದರು. ಇವನ ತಂದೆ ಬಂದಿದ್ದರು ಮಗನ ಕೂಡ. ಅವನೊಂದಿಗೆ ಮಾತುಕತೆಯಾಯ್ತು. ೪೩ ನಂಬರ ಬಿದ್ದಿದ್ದರೂ ಅವನಿಗೆ ಸೀಟು ಸಿಕ್ಕೇ ಬಿಡ್ತು. ಕಾರಣ ಏನು ಗೊತ್ತಾ, ಆ ವಯಸ್ಸಿನ ಹುಡುಗರಲ್ಲಿ ಅಷ್ಟು ಹದವಾದ ವಿಾಶೆ ಬಂದ ಹುಡುಗನಿಗೆ ಒಂದು ಸೀಟು ಅಂತ ನಿಗದಿಮಾಡಿದ್ದರು. ಇವನೊಬ್ಬನೇ ಆ ಗುಂಪಿನಲ್ಲಿ ಸಿಕ್ಕಿಬಿದ್ದವ. ಮಿಕ್ಕ ಹುಡುಗರೆಲ್ಲಾ ವಿಾಶೆ ಬೋಳಿಸಿದರೆ ಅಂದ ಎಂದುಕೊಂಡು ಮಣ್ಣು ಮುಕ್ಕಿದರು" ಎಂದು.

ಇನ್ನೊಬ್ಬ ಹುಡುಗ ಹೇಳಿದ "ಇಲ್ಲಪ್ಪಾ ಹೋದಸಾರಿ ನಾನು ಬಂದಿದ್ದೆ. 'ನಿಮ್ಮಪ್ಪನ ಹೆಸರೇನು' ಎಂದರು. ಪಟೇಲಪ್ಪಾ ಎಂದೆ. 'ಸರ್ದಾರ್ ಪಟೇಲರಾ!' ಎಂದರು ಸಮಿತಿ ಸದಸ್ಯರೊಬ್ಬರು. ಅಲ್ಲಾ ಆ ಪಟೇಲ್ ಅಲ್ಲಾ ನಮ್ಮ ಹಳ್ಳಿ ಪಟೇಲ್ ಇರಬೇಕು ಎಂದರು ಇನ್ನೊಬ್ಬರು. ನಮ್ಮನ್ನು ಮೋಸಮಾಡಲು ಪ್ರಯತ್ನಿಸುತ್ತೀಯಾ ಎಂದು ರೇಗಿದರು ಮಗುದೊಬ್ಬರು. ಉತ್ತರ: ಸೀಟು ಇಲ್ಲ ಅದಕ್ಕೇ ಈ ಬಾರಿ ನಿಮ್ಮಪ್ಪನ ಹೆಸರೇನು ಎಂದರೆ ಚಪ್ಪಲಿಯಪ್ಪ, ಷರ್ಟಪ್ಪ ಎಂದು ಹೇಳೋಣ ಎಂದು ಮಾಡೀನಿ" ಎಂದ.

ಮೂರನೆಯವ ಹೇಳಿದ "ಇದೆಲ್ಲಾ ಸುಳ್ಳಿರಲಿಕ್ಕೇ ಬೇಕು. ಆಟಕ್ಕೊಂದು ಅಡಿಕೆಮರ ಬೇಸ್ತಿಗೊಂದು ತೆಂಗಿನ ತೋಟ ಅಂತ ಆಡುಲ್ಲವೇ ಹಾಗೆ ಈ ಸೀಟುಗಳ

ಹಂಚಿಕೆ ಕಣಪ್ಪಾ! ಜಾತಿಗೊಂದು ಸೀಟು, ಮತಕ್ಕೊಂದು ಬೆಂಚು ಮಾಡ್ತಾರ್ಲಾ. ನಮ್ಮ ಜಾತಿ ಹೆಸರನ್ನೇ ಇವರು ಕೇಳಿರಬಾರದು, ಅಂತಹ ಹೆಸರು ಕೊಟ್ಟೀನಿ ನಾನು. ನನಗೆ ಸೀಟು ಖಂಡಿತ. ಆ ಇಲ್ಲದ ಜಾತೀಲಿ ನಾನೊಬ್ಬನೇ ಪೈಲ್ವಾನ್" ಎಂದ. ತಾನು ಹೇಳಿದ್ದನ್ನು ನಂಬಲಿ ಎಂದು ಖುಷಿಯಲ್ಲಿ ಎಲ್ಲರಿಗೂ ತಿಂಡಿ ಬೇರೆ ತಿನ್ನಿಸಿದ.

ನಾಲ್ಕನೆಯವನು ಹೇಳಿದ. "ನಂಬರ ಪ್ರಕಾರ ಕೊಡುತ್ತಾರೆ ಸೀಟನ್ನ. ದೇಶ ಸೇವೆ, ಸಮಾಜಸೇವೆ ಮಾಡಿದ್ದರೆ ಇನ್ನೂ ಭರ್ಜರಿ, ನಮ್ಮ ಕ್ಲಾಸಿನಲ್ಲಿ ನಾನೇ ಮೊದಲಿಗ, ಮೂರು ತಿಂಗಳು, ಚುನಾವಣಾ ಸಮಯದಲ್ಲಿ, ಆನೆ ಗುರ್ತಿಗೆ ನಿಮ್ಮ ಓಟು ಎಂದು ರಸ್ತೆ ರಸ್ತೆಗಳಲ್ಲಿ ಅರಿಚಿದ್ದೀನೆ. ಅದಕ್ಕಾಗಿ ಕೊಟ್ಟ ಸರ್ಟಿಫಿಕೇಟನ್ನೂ ಲಗತ್ತು ಮಾಡಿದ್ದೇನೆ. ಸರ್ಟಿಫಿಕೇಟ್ ಕೊಟ್ಟವರೇ ಸಮಿತಿ ಸದಸ್ಯರಾಗಿದ್ದಾರೆ. ನನಗೆ ಯೋಚನೆ ಇಲ್ಲಪ್ಪಾ!" ಎಂದು ಹೇಳಿದ.

ಕರ್ಣ ಪಾಪ! ತಲೆ ಕೆರೆದುಕೊಂಡ. ಸಮಿತಿ ಮುಂದೆ ಹೋದಾಗ ಮುಗುಮ್ಮಾಗಿರುವುದೇ ಲೇಸು. ನನ್ನ ಪುಣ್ಯ ಇದ್ದ ಹಾಗೆ ಆಗಲಿ ಎಂದು ಇಂಟರ್‌ವ್ಯೂ ಕಾಲದಲ್ಲಿ ಮಾತಾಡದೇ ಇದ್ದ. ಇವನ ಲಕ್ಷಣ, ಇವನ ಗಾಂಭೀರ್ಯ, ಇವನ ಧೀಃಶಕ್ತಿಯನ್ನು ಕಂಡು ಸೀಟು ಕೊಟ್ಟು ಪಾಠ ಕಲಿಸಿದರು

ಪ್ಯಾಸಾದಮೇಲೆ, ನಿಜ ಸಂಗತಿ ತಿಳಿದಾಗ, "ಭ್ರಷ್ಟ! ಗುರುವಿಗೆ ತಿರುಮಂತ್ರಾ ಹೇಳಿದೆಯಲ್ಲಾ" ಎಂದು ಶ್ರೀ ಪರಶುರಾಂರವರು ರೇಗಿ ಶಪಿಸಿದರೂ ಕಲಿತ ವಿದ್ಯೆಯ ಮೆಹನತ್ತಿನಿಂದ ಬೇರೆ ರಾಜ್ಯದಲ್ಲಿ ಸುಖವಾಗಿ, ಕೀರ್ತಿವಂತನಾಗಿ ಬಾಳು ಸಾಗಿಸಿದ ಕರ್ಣ.

ನೀತಿ :—ಸಾವಿರ ಸುಳ್ಳು ಹೇಳಿ ಮದುವೆಮಾಡಿಸಿ.
ಲಕ್ಷ ಸುಳ್ಳು ಹೇಳಿ ಸೀಟು ಗಿಟ್ಟಿಸಿ—

— ಪ್ರಸಾದ್.

---

ಸ್ಟಾಲಿನ್ನಿಗೆ ಆದ ಗತಿಯೇ ನಮ್ಮ ಮುಖಂಡರಿಗೂ ಆಗಬಹುದು "ಎಚ್ಚರಿಕೆ"

—ಆದರೆ ಸ್ಟಾಲಿನ್ನನು ಸತ್ತಮೇಲೆ ಆ ಗತಿ ಬಂತು ಅವನಿಗೆ. ಆದರೆ ನಮ್ಮವರಿಗೆ ಇದ್ದಾಗಲೇ ಹಾಗಾಗಬಹುದೇನೋ ಅಲ್ಲವೇ?

* *

ರಷ್ಯಾದಲ್ಲಿ ಕಾರ್ಮಿಕರು ಮೂರು ಮೂರು ಮೂಟೆಗಳನ್ನು ಒಟ್ಟಿಗೆ ಹೊರುತ್ತಾರಂತೆ.

—ಅದನ್ನು ಕಲಿತು ಬರಲು ನಮ್ಮೂರಿನ ಕಾರ್ಮಿಕರ ನಿಯೋಗವೊಂದನ್ನು ರಷ್ಯಾಕ್ಕೆ ಕಳುಹಿಸುತ್ತಾರೆಂಬುದು ಖಚಿತವಲ್ಲವಂತೆ.

# ಬಾಲ ಬಾಧೆ

ಪಾಠ ೩

## ಬಲಿತವರಿಗೆ

---

| | | | |
|---|---|---|---|
| ಆಟ | ಊಟ | ಓಟ | ಪಾಠ |
| ಆಟಂ | ಅತೋಲ್ | ಬೇಟೆ | ಮಾಟ |

ರಾಮಯ್ಯಾ! ಅಲ್ಲಿ ನೋಡು, ಹುಡು–ಗರು ಆಟ ಆಡು–ವುದನ್ನು ಏನು ಸೊಗಸು. ಇಲ್ಲಿ ನೋಡು, ಹೊಂಗೆಯ ನೆರಳಲ್ಲಿ ಬುತ್ತಿ ಉಣ್ಣು–ತ್ತಿರುವುದನ್ನು ಅತ್ತ ನೋಡು–ಏನು ಹುಮ್ಮ–ಸ್ಸಿನಿಂದ ಓಡು–ತ್ತಿದ್ದಾರೆ. ಇತ್ತ ನೋಡು ಪಾಠದ ರೀತಿ–ಯನ್ನು.

ಕ್ರುಶ್ಚೇವಾ! ಇಲ್ಲಿ ನೋಡು, ಆಟಂ ಬಿರಿ–ಯುವುದನ್ನು. ಏನು ಸೊಬಗು. ಅಲ್ಲಿ ನೋಡು, ಬಿಕಿ–ನಿ ಅ–ತೋಲಿನಲ್ಲಿ. ಅದು ಹಿರಿ–ಹಿಗ್ಗುವುದನ್ನು. ಜೀವದ ಬೇಟೆ–ಯನ್ನು ಎಷ್ಟು ಪೂರ್ಣ–ವಾಗಿ ಆಡು–ತ್ತಿದೆ. ಏನು ಮಾಟ! ಎಂತಹ ಮಾಟ–ಗಾರ.

ರಾಜಾಜಿ! ಎಂತಹ ಆಟಂ–ಆಟ–ವಿದು? ಬಿಂದು ಮಾತ್ರೇಣ ಇಂದು ಈ ಕಾಟವೇ?

ಇವ–ರೆಲ್ಲಾ ಬೇಟೆ–ಯಾಡಿದರೆ, ಓಟ ಎಲ್ಲಿಗೆ? ಇವ–ರಿಗೆ ಪಾಠ ಹೇಳಿ ಕೊಡು–ವವರ್‍ಯಾರು? ಈ ಮಾಟ ನಿಲ್ಲಿ–ಸುವರಾರು? ಊಟ ಮಾಡಿಸಿ, ಆಟ ಆಡಿಸಿ ಬೇಟೆ–ಯಾಡುತ್ತಾರಲ್ಲಾ! ಇದರ ಮಾಟ ಯಾರಿಗೆ ಗೊತ್ತು?

ಹೇಳಿ ಬರೆಯಿಸಿ :—

ಆಟ — ಆಟಂ — ರಾಜಾಜಿ
ಊಟ — ಕೊಬ್ಬು — ಬೇಟೆ
ಪಾಠ — ಅಲ್ಲೂ ಇಲ್ಲ — ಇಲ್ಲೂ ಇಲ್ಲ.

— ಬಚ್ಚ.

---

# ಜಾಹೀರ ನೋಟೀಸಕ್ಕೆ ಉತ್ತರ

ಕುಮಾರಿ ಹರಿಣಾಕ್ಷಿ ಉರ್ಫ ಲೋಕಸುಂದರಿ, ಸಾಕೀನ ರತ್ನಾವಳಿ ಎಕ್ಸಟೆನ್ಷನ ಮುಕ್ಕಾಂ ಮುಗಿಲಹಳ್ಳಿ ಈಕೆಯು, ನಯನಾಭಿರಾಮ ಅನಿರುದ್ಧರಾಯ ಅವಂತಿ ಸಾಕೀನ ಉದಯನ ಎಕ್ಸಟೆನ್ಷನ ಮುಕ್ಕಾಂ ಮುಗಿಲಹಳ್ಳಿ ಈತನು ಕೊಟ್ಟ ಜಾಹೀರ ನೋಟೀಸಕ್ಕೆ ಸಾದರಪಡಿಸಿದ ಉತ್ತರ ಏನಂದರೆ—

ಈ ಹಿಂದೆ ನೀನು ನನಗೆ ಕೊಟ್ಟ ಜಾಹೀರ ನೋಟೀಸದಲ್ಲಿ ನನ್ನ ಬಗ್ಗೆ ಮಾಡಿದ ಆರೋಪಗಳೆಲ್ಲಾ ಖೊಟ್ಟಿ ಅವೇ. ನನ್ನ ನಿನ್ನ ಮೊದಲ ಭೆಟ್ಟಿ ಕಾಲೇಜದ ಮೆಟ್ಟಿಲ ಮೇಲೆ ಆದಾಗ್ಯೆ ನಿನ್ನ ಅವಸ್ಥಾ ನೋಡಿ, ನೀನು ನೌಕರ ವರ್ಗಕ್ಕೆ ಸೇರಿದವನಿರಲಿಕ್ಕೆ ಸಾಕೆಂದು ನನಗೆ ಅನಿಸಿ, ಹಿಂದಿನಿಂದಾ ನಿನ್ನ ಕೈಯ ಪುಸ್ತಕ ಜೇಬಿನ ಪೆನ್ನ ಹಾಗೂ ಜತೆಗಾರರನ್ನು ಕಂಡು ನೀನು ವಿದ್ಯಾರ್ಥಿ ಇರುವಿಯೆಂದು ತಿಳಿದುಬಂದು ನನಗೆ ನಗೆ ಬಂತು. ಆ ನಗೆಯನ್ನು ನೀನು ಸುಳ್ಳೇ ಅಪಾರ್ಥ ಮಾಡಿ ಅದು ಪ್ರೇಮ ಇರಲಿಕ್ಕೆ ಸಾಕೆಂದು ಯೋಚಿಸಿದ್ದು ನಿನ್ನ ತಿಳಿಗೇಡಿತನಾ ತೋರಿಸುತ್ತದೆ.

ನೀನು ಪುಸ್ತಕ ಪಿಶಾಚಿ ಇದ್ದು ನಿನ್ನ ನೋಟ್ಸದ ಸದುಪಯೋಗ ಪಡೆಯಲಿಕ್ಕೆಂದು ನಿನ್ನ ಕೂಡ ಮಾತನಾಡುತ್ತಿದ್ದೆನೇ ಹೊರತು ನಿನ್ನ ಬಗ್ಗೆ ನನ್ನಲ್ಲಿ ಉದ್ಭವಿಸಿದ ಪ್ರೇಮದ ದೆಸೆಯಿಂದ ನಾನು ಹಾಗೆ ಮಾಡಲಿಲ್ಲಾ.

ಇಷ್ಟೇ ಅಲ್ಲದೆ ನಿನಗೆ ನವ್ಯಕಾವ್ಯ ಬರೆಯುವ ಕೆಟ್ಟಚಾಳಿ ಇದ್ದದ್ದು ನನಗೂ ಹಾಗೂ ಲೋಕಕ್ಕೂ ತಿಳಿದ ಸಂಗತಿ ಅದೆ. ಮರಕುಟಗ, ಕೆಂಬೂತ ವಗೈರೇ ಹಕ್ಕಿ ದತ್ತೂರಿ ವ ದಾಸವಾಳದ ಹೂವು ಹಾಗೂ ನಾಯಿ ವ ಕಪ್ಪೆ ವಗೈರೆ ಜಾನುವಾರುಗಳ ಮೇಲೆ ಪದ ಕಟ್ಟುವ ನೀನು ನನ್ನನ್ನು ಪ್ರೀತಿಸಲು ಹ್ಯಾಂಗೆ ಅರ್ಹನಾಗುವೆಯೋ ನನಗಂತೂ ತಿಳಿಯದಾಗಿದೆ.

ನಾನು ಸಿನೆಮಾ ನೋಡುವ ಕೆಟ್ಟಚಟ ಇದ್ದವಳೆಂದು ನೀನು ಹೇಳಿದ್ದು, ತನ್ನ ಎಲೆಯಲ್ಲಿ ಕತ್ತೆಯನ್ನು ಇಟ್ಟುಕೊಂಡು ಎರಡನೇವರ ಎಲೆಯ ನೊಣ ತೆಗೆಯುವಂತಹ ವರ ದುಸ್ಸಾಹಸ ಆಗಿ ಅದೆ.

ನೀನು ಸುಸೀಲದತ್ತ, ದಿಲೀಪಕುಮಾರ ವಗೈರೆಯುವರಷ್ಟು ಚಂದ ಇರುವದು ಇರಲಿ, ಬೋರಿಸಕಾರ್ಲಾಫ ಫ್ರಾಂಕಿನ್ಸಟೀನ ಮೊದಲಾದವರಷ್ಟು ಭಯಂಕರ ಇದ್ದೀ ಎಂದು ಹೇಳಬೇಕಾದ ಅವಶ್ಯಕತಾ ಇಲ್ಲ. ಹಾಂಗೆ ಮಾಡದಿರುವುದು ನನ್ನ ಒಳ್ಳೀತನ ತೋರಿಸುತ್ತದೆ. ಇದನ್ನು ಅರಿಯದೆ ನೀನು ಅಪಪ್ರಚಾರ ಮಾಡಿದ್ದು ಥರವಲ್ಲಾ.

ಆದ್ದರಿಂದ ನೀನು ನನ್ನ ಚಿಂತಾದಲ್ಲಿ ಮಗ್ನನಾಗಿ ಪರೀಕ್ಷೆಯಲ್ಲಿ ನಪಾಸ ಆದ್ದಕ್ಕೂ, ನನ್ನ ಮೆಚ್ಚಿಸಲಿಕ್ಕಾಗಿ ಹೇರಾಯಿಲ, ಬೂಟ, ಪಾಪಲಿನ ಶರಟಂಗ ವ ಉಲನ ಸೂಟಂಗ ಖರೀದಿಸಿ ಪಾಪರ ಆದ್ದಕ್ಕೂ ನಾನು ಜವಾಬ್ದಾರಳಿರುವದಿಲ್ಲ.

ಸಂದರ್ಭ ಹಿಂಗೆ ಇರಲು ನೀನು ನನ್ನ ಚಿಂತೆ ಬಿಟ್ಟು ಎರಡನೇವಳ ಪ್ರೇಮ ಮಾಡುವದೇ ಒಳ್ಳೇದು. ಈ ಉತ್ತರ ಓದಿದ ಕ್ಷಣದಿಂದ ನೀನು ನನ್ನ ಹಂಬಲ ಬಿಡಬೇಕು. ಹಾಗೆ ಮಾಡದೆ ಈ ಚಿಂತೆಯಿಂದಲೇ ನಿನ್ನ ಹೃದಯ ಭಗ್ನ ಆದರೆ ಅದರ ಇಲಾಜು ಮಾಡಿಸಲಿಕ್ಕೆ ತಗಲುವ ಖರ್ಚಿಗೂ ನಾನು ಜವಾಬ್ದಾರಳಿರುವದಿಲ್ಲ.

ಇದನ್ನೂ ನೀನು ಕಡೆಗಣಿಸಿದ ಪಕ್ಷದಲ್ಲಿ ನನ್ನ ಮದುವೆ ಆಗುವ ದುರ್ಭರ ಪ್ರಸಂಗ ನಿನಗೆ ಒದಗೀತು ತಿಳಿಯುವದೂ ಅಂತ ಕೊಟ್ಟ ಜಾಹೀರ ನೋಟೀಸದ ಉತ್ತರ.

ಈ ಸಹಿ ಕುಮಾರಿ ಹರಿಣಾಕ್ಷಿ ಉರ್ಫ ಲೋಕಸುಂದರಿ
ಸಾ॥ ರತ್ನಾವಳಿ ಎಕ್ಸಟೆನ್ಷನ ಮು॥ ಮುಗಲುಹಳ್ಳಿ
ಈಕಿಯದು ಅದೇ.

---



ಮಗೂ ಮಲಕ್ಕೊಂಡಿದೇಂತ ಗೊತ್ತಿಲ್ಲವೇನೋ—ಶಬ್ದ ಮಾಡ್ತಿದೀಯಲ್ಲ?

# ಗೀತಾಚಾರ್ಯ

ಭಗವದ್ಗೀತೆಯನ್ನು ಎಷ್ಟು ಚೆನ್ನಾಗಿ ವಿವರಿಸುತ್ತಿದ್ದರು, ಅಂತೀರಿ, ಶ್ರೀ ಗೀತಾಚಾರ್ಯರು, ಆಧುನಿಕ ವಿಜ್ಞಾನದ ತಿರುಳೆಲ್ಲವನ್ನೂ ಗೀತಾಶ್ಲೋಕಗಳಿಂದ ಉದಹರಿಸಿ ವಿವರಿಸಿದರೆ, ಕೇಳುಕ್ಕೆ ಎಷ್ಟು ಚೆನ್ನಾಗಿರುತ್ತಿತ್ತು ಅಂತೀರಿ! ಆತನ ಗೀತಾ ಉಪನ್ಯಾಸ ಮಾಲೆಗೆ ಕಿಕ್ಕಿರಿದು ತುಂಬುತ್ತಿದ್ದರು ಜನ—ಮಂಗಗಳೂರಲ್ಲಿ.

ಉಪನ್ಯಾಸ ಮುಗಿದಮೇಲೆ ಕಾಲೇಜು ವಿದ್ಯಾರ್ಥಿಗಳು ಆತನ ಹಸ್ತಾಕ್ಷರಕ್ಕಾಗಿ ಹಾತೊರೆಯುತ್ತಿದ್ದರು. ತಾಯಂದಿರು ಆತನ ಕೈಲಿ ಮಕ್ಕಳ ತಲೆಯನ್ನು ಮುಟ್ಟಿಸಿ ಕೃತಾರ್ಥರಾದೆವೆಂದೆನ್ನುತ್ತಿದ್ದರು. ಹಿರಿಯರು ಕೂಡ ಸರಸ್ವತಿ ಒಲಿದಿದ್ದಾಳೆ ಈತನಿಗೆ ಎಂದು ಹರಸುತ್ತಿದ್ದರು.

* * *

ಹೋಟಲ ಮಾಣಿಯೊಬ್ಬ ದಿನಾಲೂ ಉಪನ್ಯಾಸ ಕೇಳಲು ಬರುತ್ತಿದ್ದ. ನಮ್ರತೆಯಿಂದ ಹತ್ತಿರ ಕುಳಿತು ಒಂದು ಮಾತೂ ತಪ್ಪದಂತೆ ಕಿವಿಗೊಟ್ಟು ಕೇಳುತ್ತಿದ್ದ. ಆತ ಸೇವಕನಾಗಿದ್ದ ಹೋಟಲಿಗೇ ಆಚಾರ್ಯರು ಬೆಳಿಗ್ಗೆ 'ನಾಷ್ಟಾ' ಮಾಡಲು ಹೋಗುತ್ತಿದ್ದುದು. ಆತನೇ ಅವರ ಸಾದಾದೋಸೆಗೆ ಮೂರು ಬೆಣ್ಣೆ ಹಾಕಿ, ಒಂದೇ ಬೆಣ್ಣೆಗೆ ಬಿಲ್ ಮಾಡುತ್ತಿದ್ದುದು. ಆಚಾರ್ಯರಿಗೆ ಅಚ್ಚಿನ್ನ ಭಕ್ತ ಆ ಮಾಣಿ—ಪ್ರಾಯದ ಹುಡುಗ; ಕಲಿಯಬೇಕೆಂಬ ಆಶೆ, ಆಕಾಂಕ್ಷೆ.

* * *

ಕಾಲೇಜಿನ ಮಾಸ್ತರಿಣಿಯೊಬ್ಬಳು ಅದೇ ರೀತಿ ಆಚಾರ್ಯರ ಉಪನ್ಯಾಸಕ್ಕೆ ತಪ್ಪದೆ ಬರುತ್ತಿದ್ದಳು. ಚಾತಕಪಕ್ಷಿ ಮಳೆ ನೀರಿಗೆ ಹಾತೊರೆಯುವಂತೆ ಉಪನ್ಯಾಸದ ಮಾತುಗಳಿಗೆ ಹಾತೊರೆಯುತ್ತಿದ್ದಳು. ಜೀವನದಲ್ಲಿ ತನಗಾದ ಕಹಿ ಅನುಭವಗಳನ್ನೂ; ಆ ಅನುಭವಗಳನ್ನು ಮರೆಯಲು ಆಕೆಯು ಸ್ವತಂತ್ರಳಾಗಲು ಕೈಗೊಂಡ ಕಠಿಣ ಪ್ರಯತ್ನಗಳನ್ನೂ, ಕಡೆಗೆ ಆರ್ಥಿಕ ಸ್ವಾತಂತ್ರ್ಯ ದೊರೆತಾಗ, ಜೀವನವು ಬರುಡು ಎಂದು ಕಂಡುದನ್ನೂ ಮರೆಯಲೋಸುಗ ಆಕೆ ಈ ಆಚಾರ್ಯರ ಉಪದೇಶದ ಮಾತುಗಳನ್ನು ಕೇಳಲು ಕಾತುರಳಾಗಿರುತ್ತಿದ್ದಳು. ಮನಸ್ಸಿಗೆ ಹಿಡಿಸುವಂತೆ, ಅನುಭವದ ನಿದರ್ಶನಗಳನ್ನು ಕೊಡುತ್ತಾ, ಅತಿಕಠಿಣವಾದ ಜೀವನದ ರಹಸ್ಯಗಳನ್ನು ಆಚಾರ್ಯರಂತೆ ಇನ್ನಾರು ತಾನೇ ವಿಶದೀಕರಿಸುತ್ತಿದ್ದರು?

ಶಾಲಾಮಾಸ್ತರಿಣಿಗೆ ಸಂಗೀತದ ಹಂಬಲ ಕೂಡ ಉಂಟು. ತೊಡೆಯಮೇಲೆ ಮಕ್ಕಳನ್ನು ಕೂರಿಸಿಕೊಂಡು ಆಡಿಸುವ ಯೋಗ ಆಕೆಗಿಲ್ಲ ಎಂದು ಖಂಡಿತವಾದಾಗ,

ಆಕೆ ತಬಲವನ್ನು ತೊಡೆಯ ಮೇಲೇರಿಸಿಕೊಂಡು ಅದನ್ನು ಬಾರಿಸುವುದನ್ನು ಅಭ್ಯಾಸ ಮಾಡಿದ್ದಳು. ತಾಳ ತಪ್ಪದೆ, ಕಲಾಕೌಶಲ್ಯವನ್ನು ತೋರಿಸುವಷ್ಟು ಪ್ರವೀಣಳೂ ಆಗಿದ್ದಳು. ತಬಲವೇ ಆಕೆಯ ಸಂಸಾರ. ತಬಲವೇ ಆಕೆಯ ಸರ್ವಸ್ವ.

ಆಚಾರ್ಯರನ್ನು ಭಾನುವಾರ ಸತ್ಯನಾರಾಯಣ ಪೂಜೆಯ ನೆಪಮಾಡಿ ಮನೆಗೆ ಕರೆಸಿದಳು. ಆಕೆಯ ಸಂಗೀತದ ಮಾಸ್ತರು ಹಾಡಿದಾಗ, ಆಕೆಯೇ ತಬಲದ ಹಿಮ್ಮೇಳ ಕೂಡಿಸಿದಳು.

ಆಚಾರ್ಯರು ತಲೆದೂಗಿದರು. ಸರಸ್ವತಿಯ ವಿರಾಟ್‌ಸ್ವರೂಪದಲ್ಲಿ ಒಂದಾದ ಸಂಗೀತದ ತಾಳ ಲಯ ಬದ್ಧ ಸ್ವರೂಪವನ್ನು ಇಷ್ಟು ಚೆನ್ನಾಗಿ ಪ್ರತ್ಯಕ್ಷವಾಗಿ ಕಂಡ ಈಕೆ ಬಲು ಜಾಣೆ ಎಂದರು. ಈಕೆ ಬಲು ಸಂಸ್ಕಾರವಂತೆ ಎಂದರು. ನಿನ್ನ ಪುಣ್ಯ ಚೆನ್ನಮ್ಮಾ! ಎಂದು ಆಶೀರ್ವದಿಸಿದರು. "ನಿಮ್ಮ ಬಾಯಲ್ಲಿ ಈ ಮಾತು ಕೇಳುವುದೇ ನನ್ನ ಪುಣ್ಯ, ನನ್ನ ಅದೃಷ್ಟ" ಎಂದಳಾಕೆ.

ವಾರಕ್ಕೊಮ್ಮೆ ವಾರಕ್ಕೆ ಎರಡುಸಾರಿ ಕೂಡ ಆಕೆಯು ಸತ್ಯನಾರಾಯಣ ಪೂಜೆಯನ್ನು ಮಾಡಲು ಆರಂಭಿಸಿದಳು. ತಾಳ ತಪ್ಪಿದರೂ ಪೂಜೆ ತಪ್ಪುತ್ತಿರಲಿಲ್ಲ ಆಚಾರ್ಯರು.

* * *

ರಾಜೀವಪುರದ ಶ್ರೀಮಂತಮನೆಯ ಮೊದಲಮಗ ಪಾಪು. ಬಿ.ಎಸ್.ಸಿ. ಆನರ್ಸ್‌ನಲ್ಲಿ ಮೊದಲಿಗನಾಗಿ ಪಾಸುಮಾಡಿದಾಗ, ಆ ಮನೆಯಲ್ಲಿನ ಆನಂದ ಹೇಳ ತೀರದು. ಆದಾದ ಮೂರು ತಿಂಗಳಿಗೆ ಆತನ ಹಣೆಯಮೇಲೆ ಕೆಂಪುಮಚ್ಚೆಯೊಂದು ಕಾಣಿಸಿಕೊಂಡಿತು. ಬೆಳಗ್ಗೆ ಎದ್ದು ಮುಖಕ್ಷೌರ ಮಾಡಲು ಹೋದಾಗ ಅದು ಕಂಡು ಇದೇನಿದು ಅವಲಕ್ಷಣ ಎಂದು ಅವನಿಗೆ ಅನ್ನಿಸಿತೇ ಹೊರತು ಈ ಮಚ್ಚೆಯಿಂದ ಅವನಿಗೆ ಏನು ತ್ರಾಸೂ, ಬಾಧೆಯೂ ಆಗಿರಲಿಲ್ಲ. ತಂದೆತಾಯಿಗಳ ಬಲವಂತಕ್ಕೆ ವೈದ್ಯರಲ್ಲಿಗೆ ಹೋದಾಗ 'ಕುಷ್ಟ' ಎಂದು ತಿಳಿಯಬಂತು. ತಂದೆತಾಯಿಗಳ ದುಃಖವನ್ನೂ ನೋಡಲಾರ. ತಮ್ಮ ತಂಗಿಯರನ್ನು ಮಾತನಾಡಿಸಲಾರ. ನಾನು ಇಲ್ಲದಿದ್ದರೆ ಇವರೆಲ್ಲರೂ ಸುಖವಾಗಿರಬಹುದು ಎಂದು ಯೋಚಿಸಿದ. ನಮ್ಮವರ ಹಿತಕ್ಕೆ ಈ 'ಬಲಿ' ಕೊಡಲು ಅವಕಾಶವಿತ್ತ ಭಗವಂತನಿಗೆ ಮನದಣಿಯ ವಂದಿಸಿದ. ವೈಶಾಖ ಶುದ್ಧ ಪೌರ್ಣಮಿಯ ದಿನ ಆತನ ಕೊಠಡಿಯಲ್ಲಿ ಒಂದು ಕಾಗದ ಇತ್ತು. ಏನೋ ಬೇಸರ ಬಂದ ಕಾರಣ ಆತ ಊರಾಚೆ ದೊಡ್ಡಕೆರೆಯಲ್ಲಿ ಭಗವಂತನ ಪಾದಾರವಿಂದವನ್ನು ಸೇರಲು ನಿಶ್ಚಯಿಸಿದಾನೆಂದು ಅದರಲ್ಲಿತ್ತು. ಆತ ನಾಪತ್ತೆ. ದೊಡ್ಡಕೆರೆಯಲ್ಲಿ ಆತನ ಪಂಚೆ ಷರ್ಟು ದೊರಕಿತು. ದೇಹ ಸಿಗಲಿಲ್ಲ. ದೊಡ್ಡಕೆರೆಯಲ್ಲಿ ಮೊಸಳೆಗಳಿರುವುದನ್ನು ಎಲ್ಲರೂ ಬಲ್ಲರು. ಆರು ತಿಂಗಳನಂತರ ಆತನ ನೆನಪು ಕೂಡ ಆ ಮನೆಯಲ್ಲಿ ಅಳಿದು ಹೋಗಿತ್ತು. ಆತನ ತಾಯಿ ಮಾತ್ರ ಏನೋ ಅವ್ಯಕ್ತ ಅಗೋಚರ ಸಂಕಟಪಡುತ್ತಿದ್ದಳು. ಆಗಿಂದಾಗ್ಗೆ.

ಪೌರ್ಣಮಿ ರಾತ್ರಿ ತನ್ನ ಊರು ಬಿಟ್ಟು ಗಡ್ಡವಿಾಶೆ ಬೆಳೆಸಿಕೊಂಡು, ಜೀವನದ ರಹಸ್ಯ ಅರಿಯಲು ಆ ಯುವಕ ದೇಶಾದ್ಯಂತ ಸುತ್ತುತ್ತಿದ್ದ. ತನ್ನ ಮನಸ್ಸಿನ ಬೇಗೆಯನ್ನು, ತನ್ನ ಜೀವನದ ನಿರರ್ಥಕತೆಯನ್ನು, ಇದು ಏಕೆ? ಹೀಗೆ ಎಂಬುದನ್ನು ಅರಸುತ್ತಾ ಹೊರಟಿದ್ದ.

ಕಂಡವರು ಕೊಟ್ಟುದನ್ನು ಬೈಗಳಾಗಲಿ, ತಿಂಡಿಯನ್ನಾಗಲೀ, ತಿನ್ನುತ್ತ ವಾರಕ್ಕೆರಡು, ವಾರಕ್ಕೊಂದು, ಊಟಮಾಡುತ್ತಾ ಮಂಗಳೂರಿಗೆ ನಡೆದು ಬರುವ ವೇಳೆಗೆ, ಆರು ವರ್ಷಗಳಾಗಿತ್ತು. ಆ ವೇಳೆಗೆ, ಗಡ್ಡವಿಾಶೆಯಿಂದ ಅಘೋರವಾದ ಆತನ ಮುಖವು, ಅವಿಲ್ಲದಿದ್ದರೆ ಇನ್ನೂ ಅಘೋರವಾಗಿ ಕಾಣಬಹುದೇನೋ ಎಂಬ ಸಂತಸವನ್ನು ಆತನಿಗೆ ಮಾಡಿಕೊಡುತ್ತಿದ್ದುವು. ಇದನ್ನೇ ಆತ ಭಗವಂತನ ದಯೆ ಎಂದು ಹಿಗ್ಗಿ ನಂಬುತ್ತಿದ್ದ.

ಆಚಾರ್ಯರ ಉಪನ್ಯಾಸಗಳನ್ನು ಕೇಳಿದಾಗ, ಭಗವದ್ಗೀತೆಯ ಅಮೃತ ವರ್ಷಿಣಿಯಲ್ಲಿ ತೊಯ್ದಾಗ, ಆತನಿಗೆ ಅಲ್ಲಿನತನಕ ಕಾಣದ ಸಂತಸ ಬಂದಿತು. ಆತನ ಕಂಗಳಿಗೆ ಕಂಡ ಆಚಾರ್ಯರು ದೈವಸ್ವರೂಪಿಗಳಾಗಿದ್ದರು. ಆದರೆ ಆಚಾರ್ಯರ ಹತ್ತಿರ ಹೋಗಿ ಅವರ ಸೇವೆ ಮಾಡುವ ಧೈರ್ಯವಿದ್ದಿಲ್ಲ. ಕಾರಣ ಅವನ ಕಾಯಿಲೆ, ದೂರದಿಂದಲೇ ಅವರನ್ನು ಕೇಳಿ, ಕಂಡು ನಮೋ ಎನ್ನುತ್ತಿದ್ದ. ಆಚಾರ್ಯರ ಭಾಷಣ ಶುರುವಾದಾಗ ಅವನಿಗೆ ಬೆಳಗಾಗುತ್ತಿತ್ತು. ಅದು ಮುಗಿದಾಗ ಕತ್ತಲು. ಕತ್ತಲಿನಲ್ಲೇ ಕೇಳಿದುದನ್ನೆಲ್ಲಾ ಮೆಲುಕು ಹಾಕಿ ಮನನಮಾಡುತ್ತಿದ್ದ.

* * *

## ಇತ್ತ — ಅನಂತರ

* * *

ಕೇಳಿದವರ ಸಂಕಟ ಪರಿಹಾರಮಾಡಿ, ಅವರವರ ಜೀವನದಲ್ಲಿ ಸಮತೆಯನ್ನು ಸಹಿಷ್ಣುತೆಯನ್ನು ಕಾಣಿಸುತ್ತಿದ್ದ ಆಚಾರ್ಯರು ಮಾರ್ಗಶಿರ ಪೌರ್ಣಮಿ ದಿನ ಸಾದಾ ದೋಸೆಗೆ ತಮ್ಮ ಹೋಟಲಿಗೆ ಹೋದಾಗ ದೋಸೆಗೆ ಜಿಡ್ಡೇ ಇದ್ದಿಲ್ಲ. ತರುತ್ತಿದ್ದ ಮಾಣಿಯೇ ಬೇರೆ! ರುಚಿಯೇ ಇದ್ದಿಲ್ಲ.

ಪರವಾಗಿಲ್ಲ! ಇವತ್ತು ಹೇಗೂ ಸತ್ಯನಾರಾಯಣ ಪೂಜಾ ದಿನ. ಅಲ್ಲಿನ ಪ್ರಸಾದ ಬಲು ಚೆಂದ ಎಂದು ಸುಮಾರು ೧೧ ಗಂಟೆಗೆ ಶಾಲಾಮಾಸ್ತರಿಣಿ ಮನೆಗೆ ಹೊರಟರು ಆಚಾರ್ಯರು. ಆಚಾರ್ಯರೇ ಸತ್ಯನಾರಾಯಣ ಸ್ವರೂಪು ಎಂದು ಯಾವ ಮನೆಯಲ್ಲಿ ಪೂಜಾ ನಡೆಯುತ್ತಿತ್ತೋ ಆ ಮನೆಯ ಬಾಗಿಲು ಬೀಗ ಹಾಕಿತ್ತು. ಪಕ್ಕದಮನೆಯವರು ಹೇಳಿದರು "ಶಾಲಾಮಾಸ್ತರಿಣಿ ಕೆಲಸಕ್ಕೆ ರಾಜೀನಾಮೆ ಕೊಟ್ಟು ಯಾವುದೋ ಊರಿಗೆ ಹೋಗಿ ಒಂದು ವಾರವಾಯ್ತು ಎಂದು. ಯಾವುದೋ ಲಕ್ಷಣ ಯುವಕನ ಜತೆಗೆ ಓಡಿಹೋದಳು ಎಂದು ಒಗ್ಗರಣೆ ಹಾಕಿದರು ಇನ್ನೊಬ್ಬರು.

ಆಚಾರ್ಯರು ಹೊರಬಿದ್ದಾಗ ಮನಸ್ಸು ಸ್ವಲ್ಪ ಅವ್ಯವಸ್ಥೆಯಾಗಿತ್ತು. ಎದುರಿಗೆ ಬಂದ ಮೋಟಾರು ಕಾಣಿಸಿದರೂ ಪಕ್ಕದಲ್ಲಿ ಬಂದ ಆಟೋರಿಕ್ಷಾ ಕಾಣಿಸಲಿಲ್ಲ. ಕಂಡುದು ಯಾವಾಗ ಅಂತೀರಿ? ಆಟೋರಿಕ್ಷಾ ತಲೆಯಮೇಲೆ ಕೂತು ಹಿಮಾಲಯ ದಷ್ಟು ಭಾರವಾಗಿ ಕಾಣಿಸಿದಾಗ – ನಂತರ ಎಲ್ಲವೂ ನಿರ್ವಾಣ – ನಿಶ್ಶಬ್ಧ – ನಿರ್ವಿಕಲ್ಪ – ನಿರಾಧಾರ.

ಎಚ್ಚೆತ್ತಾಗ ಆಚಾರ್ಯರು ಆಸ್ಪತ್ರೆಯಲ್ಲಿದ್ದರು. ಆರು ದಿನಗಳಮೇಲೆ ಎಚ್ಚರ ಬಂದಿತ್ತು. ಡಾಕ್ಟರಂದರು "ಸ್ವಾಮಿ! ಆರು ದಿನಗಳಿಂದ ಅಹರ್ನಿಶೆ ಎನ್ನದೆ ನಿಮ್ಮ ಸೇವೆಮಾಡಿ ನಮ್ಮ ಕೆಲಸದ ಬಹು ಭಾಗದ ಹೊರೆಯನ್ನು ಹೊತ್ತ ಈತ ನಿಮಗೇನು ಸಂಬಂಧ" ಎಂದು. "ಈತನ ಮುಖವನ್ನೇ ಕಾಣೆ, ಈ ಗಡ್ಡ, ಈ ಮೀಸೆ ಈ ಕಾಡಿನಲ್ಲಿ ಮುಖ ಹೇಗೆ ಕಾಣಿಸುತ್ತೆ" ಎಂದರು ಆಚಾರ್ಯರು ಎಂದು ನಸುನಕ್ಕರು ಆಚಾರ್ಯರು.

ಡಾಕ್ಟರು ಆಚಾರ್ಯರಿಂದ ಸೇವೆಮಾಡಿದ ಗಡ್ಡಮೀಸೆಯಾತನ ಕಡೆಗೆ ಕಣ್ಣು ಹೊರಳಿಸಿದರು. ಸಾವು ನೋವು ಕಂಡವರು ಡಾಕ್ಟರು. ಕಷ್ಟ ದುಃಖ ನೋಡಿದವರು ಡಾಕ್ಟರು. ಅಳಲಾರದೆ ನಗುಮುಖವಾಗುತ್ತಿದ್ದವರು ಡಾಕ್ಟರು—

"ಅಯ್ಯಾ! ಈ ಕುಹಕವಾಡುವ ಈ ಅಲ್ಪ! ಈ ಆಚಾರ್ಯರ ಸೇವೆಯನ್ನೇ ನೀನು ಏಕಯ್ಯಾ ಮಾಡಿದೆ. ಆಚಾರ್ಯರು ಪುರಾಣ ಹೇಳಲಿಕ್ಕೆ ಮಾತ್ರ! ಬದನೆ ಕಾಯಿ ಬಿಡಲಿಕ್ಕಲ್ಲಾ!! ಇಂತಹವರ ಸೇವೆಮಾಡಲು ಏನಯ್ಯಾ ಕಾರಣ! ಎಂದು ,ನಮ್ರತೆಯಿಂದ ಆ ಗಡ್ಡಮೀಸೆಯ ಕುಷ್ಟರೋಗಿಯನ್ನು ಕೇಳಿದರು. "ನನ್ನ ಜೀವಮಾನದಲ್ಲಿ ಇಂತಹುದನ್ನೇ ನಾನು ಕಂಡಿರುವುದು. ಏಕೆ ಎಂಬುದು ಅರ್ಥವಾಗಿಲ್ಲ ನೀವೇ ಅದನ್ನು ನನಗೆ'ಅರುಹಲು ಯೋಗ್ಯ, ನೀವೇ ಗುರು" ಎಂದು ಅಂಗಲಾಚಿದರು ಡಾಕ್ಟರು. ಗಡ್ಡಮೀಸೆಯ ಯುವಕನೆಂದ "ಡಾಕ್ಟರೇ! ನೀವು ಕಾಣುತ್ತಿರುವುದು ಆಚಾರ್ಯರನ್ನು – ಅಪಘಾತದ ವಿಚಾರವನ್ನೆಲ್ಲಾ ಅರಿತು ಕೇಳುತ್ತಿದ್ದೀರಿ! ನಾನು ಕಂಡುದು ಆಚಾರ್ಯರನ್ನು! ಅನುಭವಿಸಲಾಗದಂತಹ ಕಷ್ಟಗಳನ್ನು ಏಕೆ ದೇವರು ದಯಮಾಡಿ ನಮಗೆ ಕೊಡುತ್ತಾನೋ ಅದನ್ನು, ಅದರ ರಹಸ್ಯವನ್ನು ನಮಗೆ ಆಚಾರ್ಯರು ತಿಳಿಸುವಂತೆ, ಆದರ್ಶಿಸುವಂತೆ ಇನ್ನೂ ಯಾರೂ ಮಾಡಲಿಲ್ಲ ನನಗೆ" ಎಂದು.

ಡಾಕ್ಟರಂದರು "ಆತ ನಿನಗೆ ಆಚಾರ್ಯ! ನನಗೆ, ನನ್ನಂತಹ ಪಾಮರರಿಗೆ ನೀನೇ ಆಚಾರ್ಯ!" ಎಂದು.

— "ಪ್ರಸಾದ್".

[ಶ್ರೀ ಪ್ರಸಾದ್ ಅವರು ಪ್ರಖ್ಯಾತ ನಗೆಗಾರರು! ಅವರನ್ನು ಏನಾದರೂ ಈ ತಿಂಗಳಿಗೆ ಬರೆದುಕೊಡಿ ಎಂದರೆ, ಈ ಬರಹವನ್ನು ಬರೆದುಕಳಸಿದ್ದಾರೆ. ಅವರ ಮೇಲಿನ ವ್ಯಾಮೋಹಕ್ಕಾಗಿ ಇದನ್ನು ಪ್ರಕಟಿಸುತ್ತಿದ್ದೇವೆಯೇ ವಿನಹಾ ಗುಣಕ್ಕಲ್ಲಾ! ಆದಗೂ ನಮಗೆ ಕಾಣಿಸದ ಕಿಳಿ–ನಗೆಯು ಇದರಲ್ಲಿ ಇದೆಯೋ ಏನೋ ಎಂಬ ಸಂಶಯವೂ ಉಂಟು—ಸಂ!]

# ★ ಕೊರಳಮಾಲೆ ಜಗುಳಿತು ★

ಮಂಡಿ ಪೇಟೆ ಚಾಮುಂಡಮ್ಮ
ಶಿಂಗಾರಪ್ಪನ ಪ್ರೀತಿಯ ಮಗಳು
ತಿರುಪತಿ ಗೊಂಬೆ, ಇ. ಸಿ. ಪಿ. ಎಸ್........ಅವಳ
ಗಂಡನು ? "ನಾನೇ"—ಎನಬಹುದಿತ್ತು
ಈ ದಿನ ಬೆಳಗೆ ಎಂಟರವರೆಗೂ!

* * *

ತಂದೆ ತಾಯಿ ಸೋದರಮಾವ
ನನ್ನನು ನೋಡಿ 'ಪರವಾ ಇಲ್ಲ' ಒಪ್ಪಿಗೆ ಇತ್ತರು
"ಏನೇ? ಚಾಮೂ! ಬೋರನತರಲೆ?
ಕೊರಳಿಗೆ ಮಾಲೆಯನಿಕ್ಕಲು ನೀನು
ಮಾಡುವುದಿಲ್ಲವೆ ಕೊಂಚವು ತರಲೆ?"
ಎಂದಾ ಹುಡುಗಿಯ ಅಕ್ಕನು ಕೇಳೆ,
"ಇಲ್ಲ, ತನ್ನಿರಿ", ಎಂದಳು ಬಾಲೆ
ಉಂಗುರದಳತೆ, ಮುಂಗೈವಾಚು,
ಅವಳಿಗೆ ಡಾಬು....ಎಲ್ಲಿಯ ಛತ್ರ
ಎಂದಿನ ಲಗ್ನ ಎಷ್ಟರ ಗಳಿಗೆ, ಎಲ್ಲವು ನಿರ್ಧರ
ಮಾಡಿದೆವಿಬ್ಬರು, ಬೇಗನೆ, ಭರಭರ
ಬಂದೇ ಬಂದಿತು ದಿನ, ಹತ್ರ!

* * *

ಆದರೆ, ಹಾಳೀ ಡಿಪಾರ್ಟ್‌ಮೆಂಟು
ಪರೀಕ್ಷೆ ಫಲಿತವ ಈ ಮುಂಜಾನೆ
ತಿಳಿಸೇಬಿಟ್ಟರು, ನನಗೀಪಿಎಸ್!
ಅವಳೋ ಭಾರಿ ಈಸೀಪಿಎಸ್!
ಸೀ ಎಂಬಕ್ಷರ ಅವಳಿಗೆ ಹೆಚ್ಚು
ನಾನೋ ತಿಂದೆನು ಬೇಸ್ತು, ಪೆಚ್ಚು!

* * *

ಚಾಮುಂಡಮ್ಮನು ಲಿಸ್ಟನು ಪಠಿಸಿ,
ಬೋರನೆ ಬೇಡ, ಯಾವನೊ ಈಸಿ
ಪಿಎಸ್ ಹಿಡಿಯಿರಿ, ಎಂದಳು ರೋಷದಿ....
ಸಿಕ್ಕೇ ಸಿಕ್ಕನು, ಮಂಡೀಪೇಟೆ ಶಿಂಗಾರಪ್ಪಗೆ
ಲಕ್ಕೀ ಹೈದನು! ಸೊನ್ನೆ, ಈ ಬೆಪ್ಪಗೆ.

— ನಾ. ಕ.

# ಚಂದ್ರಗ್ರಹಣ

ಶಿರಸ್ತೆ ಶ್ರೀನಿವಾಸರಾಯರಿಂದ ಚಂದ ಎತ್ತದೇ ಇದ್ದವನೇ ಮಹಾಪಾಪಿ! ನಮ್ಮೂರಿನಲ್ಲಿ ಶಿಶುಪಾಲ ಶಿಶುವಿಹಾರದ ವ್ಯವಸ್ಥಾಪಿಕೆಯಿಂದ ಹಿಡಿದು, ಅಪರಕರ್ಮ ಸಹಾಯ ಸಂಸ್ಥೆಯ ಡಿಸ್ಟ್ರಿಕ್ಟ್ ಆರ್ಗನೈಜರ್ ಪುಟ್ಟೊದೀಕ್ಷಿತರವರಿಗೂ ಹಲವಾರು ಧಾಂಡಿಗರು ಅವರಿಂದ ಚಂದ ಎತ್ತಿ ರಶೀತಿ ತಗಲಿಸಿದಾರೆ. ಶ್ರೀನಿವಾಸರಾಯರು ಮಾಧ್ವರು. ದರಿದ್ರನಾರಾಯಣನ ಸೇವೆಯನ್ನು ಕಿಂಚಿತ್ತಾದರೂ ಮಾಡಿ ಈ ಜನ್ಮ ಅರ್ಥಾತ್ ಅಧಿಕಾರಾವಧಿಯನ್ನು ಸಾರ್ಥಕಮಾಡಿಕೊಳ್ಳಬೇಕೆಂತ; ಟ್ರೆಜರಿಗೆ ಇರ್ಸಾಲು ತಂದ ಪಟೇಲ್, ಶ್ಯಾನುಭೋಗರುಗಳಿಂದಲೇ ಚಂದಾ ಹಣವನ್ನು ಪಾವತಿಮಾಡಿಸಿ ತಮ್ಮ ಕೈ ಕಚ್ಚದಂತೆ ನೋಡಿಕೊಳ್ಳುತ್ತಿದ್ದರು.

ಆದರೆ ರಾಯರು 'ಪಿಂಚಿಣಿ'ಯಾಗಿ ಈಗ ಚಿಂದಿಧಾರಿಗಳಾಗಿದ್ದರೂ ಚಂದಾ ಎತ್ತುವ ಸ್ವಯಂಸೇವಕರ ಕಾಟ ಮಾತ್ರ ಅವರಿಗೆ ತಪ್ಪಲಿಲ್ಲ. ಬೆಳಿಗ್ಗೆ ಗಡಿಯಾರ ಎಂಟು ಬಾರಿಸುವುದೇ ತಡ — ಯಾವೊನಾದರೂ ಆಸಾಮಿ ಅವರ ಮನೆ ಗೇಟ್ ಬಾಗಿಲನ್ನು ಬಿಚ್ಚಿ ಕಳ್ಳನಂತೆ ಒಳಕ್ಕೆ ನುಗ್ಗಿ ಬಾಗಿಲು ಬಡಿಯುತ್ತಾನೆ. ಈಸಿಚೇರಿನ ಮೇಲೆ ರಿಟೈರ್ಡ್ ಮುಖ ಹಾಕಿಕೊಂಡು ಬಿದ್ದಿರುವ ರಾಯರ ದರ್ಶನ ಆಗುವುದೇ ತಡ ಆ ಸ್ವಯಂಸೇವಕ ರಶೀತಿ ಪುಸ್ತಕ ಬಿಚ್ಚಿ ಹಲ್ಲು ಕಿರಿಯುತ್ತಾನೆ. ರಾಯರು ಪ್ರಸನ್ನ ವಾಗುವವರಿಗೂ ಕೈ ತೊಳೆಯುತ್ತ ನಿಲ್ಲುತ್ತಾನೆ. ರಾಯರು ಮಾರುತಿ ಉಪಾಸಕರೆಂಬ ಸೂಕ್ಷ್ಮವನ್ನು ಅರಿತ, ನುರಿತ ಆ ನಿರುದ್ಯೋಗಿ "ಸಹಸ್ರ ಹನುಮಂತ ಹೋಮ"ಕ್ಕೆ ಭಕ್ತಶಿರೋಮಣಿಗಳಿಂದ ಕಾಣಿಕೆ ವಸೂಲಿಗೆ ಬಂದಿದೇನೆ ಎನ್ನುತ್ತಾನೆ. ರಾಯರು ರಶೀತಿ ಪುಸ್ತಕ ಇಸುಕೊಂಡು ಸ್ವಹಸ್ತದಿಂದಲೇ ಭರ್ತಿಮಾಡಿ ರೂಪಾಯಿ ತೆತ್ತುತ್ತಾರೆ. ದೊಪ್ಪನೆ ಕುರ್ಚಿಮೇಲೆ ಬೀಳುತ್ತಾರೆ. ಅಷ್ಟುಹೊತ್ತಿಗೆ ಎನ್. ಜಿ. ಓ ಸಂಘದ ಕಾರ್ಯದರ್ಶಿಯೋ, ಗೋವರ್ಧಕ ಸಂಘದ ವ್ಯವಸ್ಥಾಪಕನೋ, ಉಪವಾಸ ಸತ್ಯಾಗ್ರಹ ಕಮಿಟಿಯ ಸದಸ್ಯನೋ, ಹಾಳೂರು ದೇವಾಲಯದ ಜೀರ್ಣೋದ್ಧಾರ ಸಮಿತಿಯ ಅಧ್ಯಕ್ಷನೋ, ಸಬಲಾಶ್ರಮದ ಸಬಲೆಯರೋ, ಹಲ್ಲಿಲ್ಲದ ಮಕ್ಕಳ ಉಚಿತ ಪೌಡರ್ ಹಾಲಿನ ಕೇಂದ್ರದ ವ್ಯವಸ್ಥಾಪಿಕೆಯೋ, ಸುಂಕುಚಿತ ವಾಚನಾಲಯದ ಸಂಚಾಲ ಕನೋ, ಪ್ರವಾಹ ಪರಿಹಾರ ನಿಧಿ ಶೇಖರಣೆಯ ಸ್ಟೇಂಡಿಂಗ್ ಮತ್ತು ವಾಂಡ್‌ರಿಂಗ್ ಕಮಿಟಿ ಸದಸ್ಯರೋ, ಶಂಕರ ಸೇವಾ ಮಂಡಲಿಯ ತಮ್ಮಯ್ಯನೊ, ಬಡಕೋಮು ವಿದ್ಯಾರ್ಥಿಗಳ ಹಾಸ್ಟಲ್ ಅಣ್ಣಯ್ಯನೋ, ಹೆಬ್ಬೂರ್ ಮಠದ ಶ್ರೀ ಶ್ರೀ ಶ್ರೀಗಳ

ಏಜೆಂಟೋ, ಗೀತಾಸಪ್ತಾಹದ ಸಂಕಟರಾಯಪ್ಪನೋ, ಪುರಾಣ ಶ್ರವಣಾಲಯದ ಮ್ಯಾನೇಜರೋ, ಕರ್ಣಾಟಕ ಸಂಘದ ನವ್ಯ ಕವಿ ರಾಮ್ ಮೂನ್ (ಚಂದ್ರ) ನೋ ಒಳಕ್ಕೆ ಧಾವಿಸಿ ಚಂದಾ ಪುಸ್ತಕವನ್ನು ರಾಯರ ಮುಂದೆ ಅರಳಿಸುತ್ತಾರೆ. ರಾಯರನ್ನು ನುಂಗಲು ರಾಹು ಕೇತುಗಳಂತೆ ಹೊಂಚುಹಾಕುತ್ತ ನಿಂತುಕೊಳ್ಳುತ್ತಾರೆ. ರಾಯರಿಗೆ ತಾವು ಅಧಿಕಾರದಲ್ಲಿದ್ದಾಗ ಮಾಡಿದ್ದು ಎಂತಹ ದೊಡ್ಡ ತಪ್ಪು ಎಂಬುದು ಅರಿವಾಗಿ ಹೆಕ್ಕತ್ತನ್ನು ಹಿಸಿಕಿಕೊಳ್ಳುತ್ತಾರೆ! ಬಂದ ಸ್ವಯಂಸೇವಕರು ರಾಯರ ಜೇಬುಗಳನ್ನು ಹಿಸಕಲು ಸಿದ್ಧವಾಗುತ್ತಾರೆ.

ರಾಯರನ್ನು ಈ ಕುತ್ತದಿಂದ ಪಾರುಮಾಡಲು ರಾಯರ ಸಹೋದ್ಯೋಗಿ ಸರಾಫ್ ಸೋಮಯ್ಯನೇ ಬರಬೇಕಾಯಿತು. ರಾಯರು ತಮ್ಮ ಕಷ್ಟವನ್ನು ಸೋಮಯ್ಯನಿಗೆ ಬರೆದುಕೊಂಡು ಗೋಳಾಡಿದ್ದರು. ಅಲ್ಲದೆ ಸೋಮಯ್ಯ ಬಹಳ ಚತುರ ಎಂಬ ವಿಷಯ ನನ್ನ ಕಿವಿಗೂ ಬಿದ್ದಿತ್ತು. ಭಿಕ್ಷುಕರ ಬಾಯಿ ಮುಚ್ಚಿಸುವುದು, ಇನ್ಷ್ಯೂರೆನ್ಸ್ ಏಜೆಂಟರನ್ನು ಸುಸ್ತುಮಾಡುವುದು, ಚಂದಾ ವಸೂಲಿಗೆ ಸ್ವಯಂ ಸೇವಕರು ಮನೆಗೆ ಬರದಂತೆ ಮಾಡುವುದು, ಸಾಹೇಬರು ರೇಗಿದರೆ ಮನೆಯಲ್ಲಿ ಸರಿಮಾಡುವುದು, ವೋಟಿನ ಕಾಲ ಬಂದರೆ ಬಾಗಿಲಮೇಲೆ ಮೂರು ನಾಮ ಹಾಕಿ ನಾಳೆ ಅಂತ ಬರೆಯುವುದು, "ಬೊಗಳುವ ನಾಯಿಗಳಿವೆ. ಎಚ್ಚರಿಕೆ" ಎಂದು ಬರೆದಿರುವ ಬೋರ್ಡುಗಳನ್ನು ಅಪಹರಿಸುವುದು, ಸಿನಿಮಾ ತಾರೆಯರ ಜೀವನ ಚರಿತ್ರೆ ಹೇಳುವುದು, ಬಿ. ಟಿ. ಸಿ. ಬಸ್ಸು ಇಷ್ಟೇ ಹೊತ್ತಿಗೆ ಬರುತ್ತೆ ಎಂದು ಸ್ಪಷ್ಟವಾಗಿ ಹೇಳುವುದು, ಮಾರ್ಕೆಟ್ ಗಡಿಯಾರದ ಟೈಮೇ ಸರಿ ಅಂತ ವಾದಮಾಡುವುದು, ಮುಂತಾದ ವಿಷಯಗಳಲ್ಲಿ ಬಹಳ ಬುದ್ಧಿವಂತನೆಂದು ಹೆಸರುವಾಸಿಯಾಗಿದಾನೆ. ಯಾವ ಸಂದರ್ಭಕ್ಕಾದರೂ ಅನುಕೂಲಕ್ಕೆ ಬರುವಂತಹ ನೂರಾರು ಚತುರೋಕ್ತಿಗಳನ್ನು ಶೇಖರಿಸಿಟ್ಟುಕೊಂಡಿದಾನಂತೆ. ಸೋಮಯ್ಯ ಕಳೆದ ಭಾನುವಾರ ನನಗೆ ಟೋಪಿ ಬ್ರಾಂಡ್ ಬೀಡಿ ಗಡಂಗಿನಲ್ಲಿ ಸಿಕ್ಕಿ ರಾಯರನ್ನು ಭೇಟಿಮಾಡಿಬಂದ ಸಮಾಚಾರ ತಿಳಿಸಿದ್ದ !

ಮೂರು ದಿವಸದ ಹಿಂದೆ, ಮಗನಿಗೆ ಪ್ರಥಮವಾಗಿ ತಲೆ ಮಾಡಿಸುತ್ತೇವಾದ್ದರಿಂದ ರಾಯರನ್ನು ಊಟಕ್ಕೆ ಕರೆಯಬೇಕೆಂದು ನಾನು ಅವರ ಮನೆಗೆ ಹೋಗಿದ್ದೆ. ರಾಯರ ಮುಖದಲ್ಲಿ ಯಾವುದೋ ನವೀನ ರೀತಿಯ ಸಂತಸ ನೆರಳಾಡುತ್ತಿತ್ತು. ಚಿಂತೆಯ ಕಂಬಿಗಳು ಮಾಯವಾಗಿ ನಕ್ಕಾಗ ಕೆನ್ನೆ ಗುಳಿ ಬೀಳುತ್ತಿತ್ತು. ಏನು ಇದರ ಮರ್ಮ ಅಂತ, ರಾಯರು ಕೊಟ್ಟ ಬಿಸಿ ಕಾಫಿಯನ್ನು ಮೆಲ್ಲಗೆ ಹೀರುತ್ತ ಸುತ್ತ ನೋಟ ಹರಿಸುತ್ತ ವಕ್ರವಕ್ರವಾಗಿ ಆಡುತ್ತ ಕುಳಿತಿದ್ದೆ. ಸುಮಾರು ಬೆಳಗಿನ ೭-೩೦ ಗಂಟೆ. ಒಬ್ಬ ಚಂದಾ ಜೀವಿ, ಶುಭ್ರವಾಗಿ ಟೋಪಿ ಹಾಕಿಕೊಂಡು, ರಶೀತಿ ಪುಸ್ತಕ, ಸೀಸದಕಡ್ಡಿ ಸಮೇತ ಹಾಜರಾದ! ಅದು ಹೇಗೆ ಗೊತ್ತಾಯಿತು ಎಂದರೆ—

ಅವನು ಬಂದ ರೀತಿ, ನಿಂತ ತರಹ, ಹಲ್ಲು ಕಿರಿತ, ನಯ, ಪೀಠಿಕೆ, ಕಥೆ, ಮುಕ್ತಾಯ ....ಇವೆಲ್ಲ ನೋಡಿದಮೇಲೆ ಚಂದ ಎತ್ತುವುದಕ್ಕೆ ಬಂದ ಇಸಮು ಎಂಬುದು ಗೊತ್ತಾಗುವುದಿಲ್ಲವೆ! ರಾಯರಿಗೆ ಈ ಜನ್ಮದಲ್ಲಿ ಇವರ ಕಾಟ ತಪ್ಪಿದ್ದಲ್ಲ ಅಂತ ನಾನು ಕುರ್ಚಿಗೆ ಒರಗಿ ಎರಡನೆ ಪಂಚವಾರ್ಷಿಕ ಯೋಜನೆಯನ್ನು ಚಿತ್ರಿಸಿಕೊಳ್ಳುತ್ತ ಇದ್ದೆ. ರಾಯರು ಉಗುಳು ನುಂಗಿ, ಅಶಕ್ತ ಪೋಷಕ ಸಂಘದ ಆ ದರಿದ್ರನಾರಾಯಣನನ್ನು ಪಕ್ಕದಲ್ಲೇ ಕೂರಿಸಿಕೊಂಡು ರಶೀತಿ ಪುಸ್ತಕದಲ್ಲಿ ಸುಲಲಿತವಾಗಿ ಬರೆದು ಅವನ ಜೋಳಗಕ್ಕೆ ರೂಪಾಯಿ ಹಾಕಿದರು. ರೂಪಾಯಿ, ಪುಸ್ತಕಗಳ ಸಮೇತ ಆ ಸ್ವಯಂ ಸೇವಕ ಹೊರಡಲು ಕೈಜೋಡಿಸಿಕೊಂಡು ಎದ್ದ! ರಾಯರು ಆತನನ್ನು ಕೂರಿಸಿದರು. ಪಕ್ಕದ ಮೇಜಿನ ಡ್ರಾಯರನ್ನು ಎಳೆದು ಒಂದು ರಶೀತಿ ಪುಸ್ತಕ ಪೆನ್ಸಿಲ್ಲನ್ನು ತೆಗೆದು ಅತನ ಮುಂದಿಟ್ಟು "ಅಖಂಡ ಕರ್ಣಾಟಕದ ಅನಾಥಾಲಯ"ಕ್ಕೆ ಯಥಾಶಕ್ತಿ ಸಹಾಯ ಅಂತ ಉದ್ಗಾರ ತೆಗೆದರು. ಅಶಕ್ತಪೋಷಕ ಸಂಘದ ಆಸಾಮಿ ಮೇಲೆ ಕೆಳಗೆ ನೋಡಿದ. ಎಲ್ಲೆಲ್ಲೂ ಶೂನ್ಯ! ಉಗುಳು ನುಂಗಿದ. ಜೇಬಿಗೆ ಕೈಹಾಕಿ ಜೋಲುಮುಖ ಹಾಕಿದ! ರಾಯರು ಮೂರು ನಿಮಿಷದ ಹಿಂದೆ ಕೊಟ್ಟಿದ್ದ ರೂಪಾಯಿ ಯನ್ನು ತೆಗೆದು ಥಂಗನೆ ಹಾರಿಸಿ ರಾಯರ ಕೈಗೆ ಬೀಳಿಸಿದ! ರಶೀತಿ ಬರೆದು ಪುಸ್ತಕಾನ ಮೇಜಿನ ಮೇಲಿಟ್ಟ! ರಾಯರು ತಡವರಿಸುತ್ತ ಪೆನ್ಸಿಲನ್ನು ಕೈಗೆ ತೆಗೆದು ಕೊಳ್ಳುವುದರಲ್ಲೇ ಆಸಾಮಿ ಕಣ್ಣುಮುಚ್ಚಿಕೊಂಡು ಕೈ ಝಾಡಿಸಿ ಪರಾರಿಯಾಗಿದ್ದ! ನಾನು ಎದ್ದು ನಿಂತುಕೊಂಡೆ. ರಾಯರು ಚಮತ್ಕಾರದ ಕಣ್ಣೋಟವನ್ನು ಹರಿಸಿದ್ದರು.

"ಹೋಗ್ತೀಯ" ಅಂದರು ರಾಯರು.

"ಊಟಕ್ಕೆ ಖಂಡಿತ ತಪ್ಪಿಸಕೊಳ್ಳಕೂಡದು" ಅಂತ ಕಡೆಯಲ್ಲಿ ಇನ್ನೊಂದು ಸಲ ಹೇಳಿ ಒಂದೇ ಉಸರಿಗೆ ಮನೆ ಕಡೆ ಓಡಿದೆ! ಬರ್‍ತಾ ದಾರಿಯಲ್ಲೇ ನಾನುಮಲ್ ಅಂಡ್ ಸನ್ಸ್‌ನಲ್ಲಿ ನಾಲ್ಕಾಣೆ ಕೊಟ್ಟು ಒಂದು ನೂರು ಹಾಳೆಯ ಅಚ್ಚಾದ ಕಾಲಿ ರಶೀತಿ ಪುಸ್ತಕ ಕೊಂಡುಕೊಂಡು ಬಂದು ಮನೇಲಿಟ್ಟೆ–ಸ್ವಲ್ಪವಾದರೂ ಸಮಯದಲ್ಲಿ ಕೈ ಕಚ್ಚದಂತೆ ನೋಡಿಕೊಳ್ಳಬಹುದು ಅಂತ!

— ಹಾ. ರಾ.

---

# ಸೊಪ್ಪಿನ ಕಡಲೆ

ಕೂಡದು !
ತಪ್ಪು !
ಸೂಟಿಗರಾರೂ ಮಾಡರು....ಗೊತ್ತು !
ಪಬ್ಲಿಕ್‌ರಸ್ತೆ !
ಓಡುವ ಕಾರುಗಳೈವತ್ತೆಂಟು
ಅದರೊಳಗೆಲ್ಲ ಮಹಿಳೆಯರುಂಟು
ನನಗೂ ನಾಚಿಕೆ ಗೀಚಿಕೆ ಉಂಟು
ನಾನೂ ಗಣ್ಯ, CLASS I ಪುಣ್ಯ,
ಟೈ ಇದೆ, ಹ್ಯಾಟಿದೆ' ಕುಪ್ಪಸ ಕಾಲಿಗೆ,
ಏಜೋ? ನಲವತ್ತೆಂಗ್ಲೀಷ್ ನಾಲಗೆ
ದೊಡ್ಡಕುಲ ಜನ್ಯ, ಮಾವನು ಮಾನ್ಯ
......................................
ಆದರು,' ಒಂದೊಂದಾಗಿಯೇ ಜಗಿಯುವೆ
ಇತರರು ನಕ್ಕರು, ಸಿಪ್ಪೆಯನುಗಿಯುವೆ
ಸೊಪ್ಪಿನ ಕಡಲೆಯ– ಹಸಿ ಹಸಿಕಾಯನು
ಮುಪ್ಪಿನ ನಾನು, ಗಾವಮಾಕಾಯನು
...................... ................
ಕೂಡದು ಎಂಬುದ ಮಾಡುವ ಖುಷಿಯಲಿ
ಆವಡಿ ನಿರ್ಣಯ ತತ್ವದ ಕೃಷಿಯಲಿ
ಹೆಜ್ಜೆಹೆಜ್ಜೆಗೂ ಬಾಯನು ತೆರೆದು
ಲಜ್ಜೆಗಿಜ್ಜೆಗಳನಾಚೆಗೆ ತೂರೆದು....
ಹುಡುಗರು ತಿಂದರೆ ತಪ್ಪೇನಿಲ್ಲ
ಆಡೋವುಟ್ಟದ ಸೋಪ್ಪೇ ಇಲ್ಲ
ಆಡೋ ಹುಡುಗನು ನಾನೆಂದಲ್ಲರು
ಆಡಲಿ ನನ್ನನು ನೋಡುವರೆಲ್ಲರು.

— ಪಾಟಾಳಿ.

# ಮುಗಿಲುಹಳ್ಳಿಯ ಕಾಳಗದ ಕಣದಲ್ಲಿ

---

ಅತ್ತ — ಢಂ ಢಂ ಢಂ .... ಹೈಡ್ರೋಜನಬಾಂಬ್ ಸಿಡಿಯಿತು. ಆಕಾಶದಲ್ಲಿ ತುರ್ಫಾ ನೂರುವೈಲು ವೇಗದಲ್ಲಿ ಬೀಸಿತು .... ಭೊಂ ಭೊಂ ಬೆಳಗಾವಿಯಿಂದ ಇನ್ನೂರುವೈಲು ವೇಗದಲ್ಲಿ ಎಕ್ಸ್‌ಪ್ರೆಸ್ ಹೊರಟಿತು — ಆಳ್ಳಿದೆಯುವರು ದಂಗಾಗಿ ಬಿದ್ದರು. ಭೀಮ ಗರ್ಜನೆ ಮಾಡುತ್ತಾ ಹೊರಟಿತು ಸಿಂಹ.

ಇತ್ತ — ಢಂ ಢಂ ಢಂ .... ರಣಭೇರಿ ಹೊಡೆಯುತ್ತಿದೆ. ಜರಾಸಂಧನು ಸಡ್ಡು ಹೊಡೆದು ನಿಂತ. ಅವನ ಹೂಂಕಾರಕ್ಕೆ ಹೆಣ್ಣಿದೆಯುವರು ಪ್ರಜ್ಞೆತಪ್ಪಿದರು. ಇನ್ನೂರು ವೈಲಿಯ ರೈಲನ್ನು ಮುಂಗೈಯಲ್ಲಿ ಹಿಡಿದು ನಿಲ್ಲಿಸಿ ಭೀಮನನ್ನು ಕೆಳಗೆಳೆಯುವೆನೆಂದು ಹಸಿದ ಹುಲಿಯಂತೆ ಕಾದು ನಿಂತಿದ್ದಾನೆ.

ಈ ಕಾಳಗವನ್ನು ನೋಡಲು ಯಾರೂ ಮರೆಯಬಾರದು ಎಂದು ಉಜ್ಜಪ್ಪ (ಪ್ರೊಪ್ರೈಟರ್, ಜೈಹಿಂದ ದಂಗಲ್, ಮುಗಿಲಹಳ್ಳಿ) ಇವರು ಕರಪತ್ರ ಹಂಚಿದ್ದಾರೆ.

ಈ ಕಾಳಗ ಬೆಳಗಾಂವಿಯ ಪೈಲವಾನ್ ಯಶವಂತ ಬಳವಂತ ಬಹದ್ದೂರ್ (ಮೂರು ಲೋಕದ ಗಂಡ ಕರಡೀಕೊಪ್ಪದ ಪೈ॥ ಕಲ್ಲಾನಿಗೆ ಮೂರು ಮಿನಿಟನಲ್ಲಿ ಒಗೆದವ) ಹಾಗೂ ಮೈಸೂರು ಇಸ್ಟೇಟ್ ಛಾಂಪಿಯನ್ ಮುಗಿಲುಹಳ್ಳಿ ಕೆರೆಗರಡಿ ಪೈ॥ ಗಫಾರ್ ಶಿಷ್ಯ ಪೈ॥ ಮಸ್ತ್‌ಖಲಂದರ್ (ಶಿಡೇನೂರು, ಪರವೀರಭಯಂಕರ ಪೈ॥ ಬುದ್ಧೂಬೊಮ್ಮ್ಯಾನಿಗೆ ಕಣ್ಣುಮುಚ್ಚಿ ತೆಗೆಯುವುದರಲ್ಲಿ ಮಣ್ಣು ತಿನ್ನಿಸಿದವ) ಇವರ ನಡುವೆ ನಡೆಯಲಿದೆ.

ಪೂರ್ಣ ಕುಸ್ತಿ ನಿಕಾಲಿ ಆಗುವವರೆಗೆ ಬಿಡುವದಿಲ್ಲ. ಚಡ್ಡಿ ಹಿಡಿದು ಆಡುವ ಕರಾರು ಅದೆ. ಆದರೆ ಡುಮುಕಿಗದ್ದಲೋಡ್ ಮಾಡುವಂತೆ ಇಲ್ಲ. ಕುಸ್ತಿ ಆಗಿದೆ ಅಂತ ವಗೆದು ಓಡಿಹೋಗಬಾರದು. ಪ್ರೇಕ್ಷಕರು ಥೇಟರ ರೂಲ್ಸಿಗೆ (?) ಒಳಪಡಬೇಕು.

ಈ ಜೊತೆ ಅಗದಿ ಹ್ಯಾವದಿಂದ ನೇಮಕವಾಗಿದೆ. ಈ ಕುಸ್ತಿಯ ತಾರೀಫನ್ನು ಎಷ್ಟು ಹೇಳಿದರೂ ಸಾಲದು. ಇಬ್ಬರು ಪೈಲ್ವಾನರೂ ಭಾರಿ ತಯಾರಿ ಇದ್ದಾರೆ.

ಮುಗಿಲುಹಳ್ಳಿಯಲ್ಲಿ ಈ ಕುಸ್ತಿ ಆಗಲಿರುವುದು ಪೂರ್ವ ಜನ್ಮದ ಪುಣ್ಯವೇ ಸರಿ. ಉಜ್ಜಪ್ಪನಿಂದಲೇ ಇಂಥಾ ಜೊತೆ ಜೋಡಿಸುವುದು ಸಾಧ್ಯ. ಈಗ ಕುಸ್ತಿ ಕಲೆಯೇ

ಎಲ್ಲೂ ಇಲ್ಲ. ಹಿಂದೆ ಎಂದೋ ಇತ್ತು. ಈಚೆಗೆ ನಿರ್ನಾಮ ಆಯ್ತು ಎಲ್ಲ ಕಡೆಗಳಲ್ಲೂ ಆದರೆ ನಮ್ಮ ಊರಿನಲ್ಲಿಲ್ಲ. ಅದು ನಮ್ಮಲ್ಲಿ ಉಳಿಯಲು ಉಜ್ಜಪ್ಪನೇ ಕಾರಣ.

ಹಿಂದೊಮ್ಮೆ ಅವನು ಮೈಸೂರ ಇಸ್ಟೇಟ ಛಾಂಪಿಯರ್ನ ಆಗಿದ್ದನಂತೆ. ಆದರೆ ಈಗ ಅವನಿಗೆ ತನ್ನ ದೇಹವನ್ನೇ ಹೊರಲು ಅಸಾಧ್ಯವಾಗಿದೆ. ಆರಡಿ ಎತ್ತರದ ಆಳು, ಸುತ್ತಳತೆ ಮೂರು ಗಜ, ಅಜಾನುಬಾಹು, ನಗಾರಿ ಹೊಟ್ಟೆ, ಚಾಮರದಂತಿರುವ ಮೀಸೆ.

ಕನ್ನಂಬಾಡಿಕಟ್ಟೆ ನೋಡು
ಉಜ್ಜಪ್ಪಜ್ಜನ ಹೊಟ್ಟೆ ನೋಡು
ಅದರಜೊತೆಗೆ ಅವನ ಮೆಹನತ್ತನ್ನೂ ನೋಡು.

ಮಸಲಾ — ಈ ಜೊತೆ ಕೂಡಿಸಿದ್ದು ಸಾಮಾನ್ಯದ ಕೆಲಸವೇ?

ಯಶವಂತ ಬಲವಂತ ಬಹದ್ದೂರ್ ಆರುಮಕ್ಕಳ ತಂದೆಯಂತೆ. ಅಮೃತಸರ, ಅಮರಾವತಿ, ಆಲೆಪ್ಪಿ ಎಲ್ಲೇ ಹೋಗಲಿ ಅವನು ಯಾರಿಗೂ ಸೋತಿಲ್ಲವಂತೆ. ಅವನಿಗೆ ಬೇಸರ ಬಂತಂತೆ. ಹುಳುಗಳ ಜೊತೆಗೆ ಕುಸ್ತಿ ಆಡುವುದೆಲ್ಲ, ಹೆಣ್ಣಿಗರ ಜೊತೆಗೆ ಅಖಾಡಕ್ಕೆ ಇಳಿಯುವುದಿಲ್ಲ. ಯಾರಾದರೂ ಗಂಡಸರು ಇದ್ದರೆ ಬರಲಿ ಎಂದು ಅವನು ನೆಲಹಿಡಿದು ಕೂತನಂತೆ. ಹಾಕಿದನಂತೆ ಸವಾಲು.

ಕೇಳಿದ ಅದನ್ನು ಮಸ್ತ್‌ಖಲಂದರ್. ರೇಗಿದ, ಕಣ್ಣು ಕೆಂಪುಮಾಡಿದ, ಹಲ್ಲು ಕಡಿದ, ತಲ್ವಾರ್ ಮೀಸೆಯಮೇಲೆ ಕೈಯಿಟ್ಟ. ಅಖ್ಖ್‌ಥೂ ಅಂದ. ಅಲಲಲಲಾ.... ಎಲೋ ಮುದಿಗೂಬೆ ಸಸ್ತಾ ಬೂಢಾ .... ಕಂಜೋರ್ .... ನೆವ ತೆಗೆದೆಯೋ? ಆರೇರೇ .... ಧೈರ್ಯವಿದ್ದರೆ ಬಾ. ಮರಾಠಿಗನ ಸೊಕ್ಕು ಇಳಿಸುವ ಕನ್ನಡ ಕಲಿ ನಾನು ಎಂದನಂತೆ, ಖಲಂದರ್. ನೆಗೆದನಂತೆ ಛಂಗ್ ಎಂದು, ಹಸಿದ ಹುಲಿಯಂತೆ.

ಜೊತೆಯೇನೋ ಕೂಡಿತು. ಆಡಿಸುವವರು ಬೇಕಲ್ಲ. ಇವರಿಬ್ಬರೂ ಜಿದ್ದಿನ ಭರದಲ್ಲಿ ಒಬ್ಬರನ್ನೊಬ್ಬರು ಎಲ್ಲಿ ಕೊಂದುಬಿಡುವರೋ ಎಂದು ಹೆದರಿ ಕುಸ್ತಿ ಆಡಿಸಲು ಯಾರೂ ಒಪ್ಪಲಿಲ್ಲವಂತೆ. ತಮ್ಮ ತೋಳ್ಬಲ ವ್ಯರ್ಥವಾಯಿತಲ್ಲಾ ಎಂದವರು ದೇವರಲ್ಲಿ ಮೊರೆಯಿಟ್ಟರಂತೆ. ಅವರ ಕಾಟ ತಡೆಯಲಾರದದೆ ದೇವರು ಉಜ್ಜಪ್ಪನ ಮೊರೆ ಹೊಕ್ಕನಂತೆ. ಆಗ ಉಜ್ಜಪ್ಪ ಈ ಜೊತೆ ನೇಮಿಸಿದ್ದಾನೆ.

ಈ ಮಧ್ಯೆ ಮದೋನ್ಮತ್ತನಾದ ಖಲಂದರ್ ಒಂದು ಹೇಳಿಕೆ ಕೊಟ್ಟಿದಾನೆ:—

ಹಿಂದು ಮುಸಲ್ಮಾನ ಬಾಂಧವರಲ್ಲಿ ಆಗ್ರಹದ ವಿನಂತಿ. ಏನಂದರೆ ಬೆಳಗಾಂವಿಯ ಯ. ಬ. (ಡ?) ಬಹದ್ದೂರನ ಎಮ್ಕೆ ಮುರಿದು ಹಾಕುತ್ತೇನೆಂದು ಖುದಾಕೆ ಕಸ್ಸಮೀ ಹೇಳುತ್ತೇನೆ ಆ ಕುರಿಯಮೇಲೆ ತೋಳನಂತೆ ಬಿದ್ದು ಮೂರು ಮಿನಿಟಿನಲ್ಲಿ

ಅವನ ಕಹಾನಿ ಖತಂ ಮಾಡುತ್ತೇನೆ. ಕಿಂಗ್‌ಕಾಂಗ್ ದಾರಾಸಿಂಗ್ ಮೊದಲಾದವರೇ ಹೆದರಿ ನಮ್ಮ ಆಸ್ಮಾನ್‌ಗಾಂಗೆ ಬರಲಿಲ್ಲ ಯಂದಮೇಲೆ ಈ ಮುದಿಗೂಬೆ ಬರುವುದೆಂದರೇನು. ಈಗಲಾದರೂ ಯ. ಬ. ಬಹದ್ದೂರ್‌ನಲ್ಲಿ ನನ್ನ ಆಗ್ರಹದ ಒತ್ತಾಯವಿದೆ. ಬಂದರೆ ಅವನ ಜರ್ಾ ನಿಕಾಲಿ ಆದೀತು. ತಾವೆಲ್ಲರೂ ನನ್ನಲ್ಲಿ ನಂಬಿಕೆ ಇಡ್ರಿ—

ಸಹಿ – ಮಸ್ತ್‌ಖಲಂದರ್ ಪೈ||

ಇದಕ್ಕೆ ಯಶವಂತ ಬಲವಂತ ಬಹದ್ದೂರನ ಉತ್ತರ ಹೀಗಿದೆ:—

ಮುಸಲ್ಮಾ ಹಿಂದೂ ಬಾಂಧವರಲ್ಲಿ ನನ್ನ ಸಪ್ರೇಮ ವಿ. ವಿ. ಗಳು. ಮುಗಿಲು ಹಳ್ಳಿಯ ಪೈ|| ಮಸ್ತ್‌ಖಲಂದರ ಅಂಬುವನು ತಿಂದ ಕೊಬ್ಬು ಹೆಚ್ಚಾಗಿ ನನ್ನ ಎಮ್ಕೆ ಮುರಿಯುತ್ತೇನೆ ಅಂತ ಆಣೆ ಪ್ರಮಾಣ ಮಾಡಿದ್ದಾನೆ. ನನ್ನ ಮುದಿಗೂಬೆ ಅಂತ ಅಪಹಾಸ್ಯ ಮಾಡಿದ್ದಾನೆ. ಕೈಲಾಗದವ ಮೈ ಪರಚಿಕೊಂಡಂತೆ. ಇರಲಿ. ಛತ್ರಪತಿ ಶಿವಾಜಿ ಮಹರಾಜರ ಭಕ್ತನಾದ ನಾನು ನಾಮಾಂಕಿತ ಪೈಲ್ವಾನರನೇಕರನ್ನು ಮಣ್ಣು ಮುಕ್ಕಿಸಿ ತಣ್ಣೀರ ಕುಡಿಸಿದ್ದೇನೆ. ನನ್ನ ಝೇಂಕಾರ ಮಾತ್ರದಿಂದಲೇ ಖಲಂದರನ ಎದೆಯೊಡೆದು ನೀರಾಗುವುದು ಖಂಡಿತ. ಕುಸ್ತಿ ಆಗಲಾರದು. ಆದರೂ ನನ್ನ ನೋಡುವುದಕ್ಕಾಗಿ, ನಾನು ಖಲಂದರನ ಗೋಣು ತಿರುವುವ ದೃಶ್ಯ ನೋಡಲಿಕ್ಕಾಗಿ ಜೈಹಿಂದ್ ದಂಗಲಿಗೆ ಬರ್ರಿ —

ಸಹಿ – ಯ. ಬ. ಬಹದೂರ್.

ಉಜ್ಜಪ್ಪನೂ ಸಹ ಒಂದು ಹೇಳಿಕೆ ಹೊರಡಿಸಿದ್ದಾನೆ:—

ಪೈ||ಗಳಾದ ಯ. ಬ. ಬಹದ್ದೂರ್ ಹಾಗೂ ಮಸ್ತ್‌ಖಲಂದರ್ ಇವರುಗಳು ದಿನ ಒಂದಕ್ಕೆ ಹತ್ತುಸೇರು ಬಾದಾಮಿಹಾಲೂ ಹತ್ತುಸೇರು ದೂಧ್‌ಪೇಡ ಸ್ವೀಕರಿಸುವುದರಿಂದ ಅವರ ತಲೆಯಲ್ಲಿ ಮಸ್ತಿ ತುಂಬಿದೆ. ಪೈಲ್ವಾನರ ಮಾತ ನಂಬಬಾರದು. ಕುಸ್ತಿ ಖಂಡಿತವಾಗಿಯೂ ಧುರಂಧುರಿ ಸವ ಸವ ನಡೆಯುತ್ತದೆ. ಡಾವು ಪೇಚುಗಳ ಕೆಲಸ ಅಗ್ದೀ ಜೋರಾಗಿ ನಡೆಯುತ್ತದೆ. ನೀವು ನೋಡದಿದ್ದರೆ ನಿಮ್ಮ ತಾಯಿತಂದೆಗಳು ನಿಮ್ಮನ್ನು ಪಡೆದದ್ದೇ ವ್ಯರ್ಥ. ನಿಮ್ಮ ಜೀವನವೇ ವ್ಯರ್ಥ.

ಕುಸ್ತಿಪ್ರೇಮಿಗಳ ಗುಲಾಮ,
ಉಜ್ಜಪ್ಪ.

ಕುಸ್ತಿಯದಿನ ಹತ್ತಿರ ಬಂದಂತೆ ಉತ್ಸಾಹ ಹೆಚ್ಚಿದೆ. ಜನರ ರಕ್ತ ಕುದಿಯುತ್ತಿದೆ ಉತ್ಸಾಹದಿಂದ. ಮಸ್ತಖಲಂದರ ಗೆಲ್ಲುವನೋ, ಯ. ಬ. ಬಹದೂರನೋ? ಮುಗಿಲು ಹಳ್ಳಿಗೆ ಜಯವೋ? ಬೆಳಗಾವಿಗೋ? ಕನ್ನಡಿಗನಿಗೋ? ಕರ್ನಾಟಕನಾದರೂ ಮಹರಾಷ್ಟ್ರವಾದಿಯಾದವನಿಗೋ?

ಬೆಳಗಾವಿಯಲ್ಲೂ ಉತ್ಸಾಹ ಕೆರಳಿದೆ. ಸಂಯುಕ್ತ ಮಹಾರಾಷ್ಟ್ರ ಪರಿಷತ್ತು ಈ ಕುಸ್ತಿಯಲ್ಲಿ ಬಹದ್ದೂರ್ ಗೆದ್ದರೆ ಬೆಳಗಾಂವಿ ಮಹಾರಾಷ್ಟ್ರಕ್ಕೆ ಸೇರಬೇಕೆಂದು ಒತ್ತಾಯಪಡಿಸುವುದಾಗಿ ಹೇಳಿಕೆ ಹೊರಡಿಸಿದ್ದಾರೆ. ಬಳ್ಳಾರಿಯಲ್ಲಿ ಕಡುಬು ತಿಂದು ರಾಜಲುಬಂಡಾಕ್ಕೆ ನೀರು ಕುಡಿಯಲು ಹೋದ ಆಂಧ್ರದವಸ್ತಾದಿಗಳು ಈ ಹೇಳಿಕೆಗೆ ಬೆಂಬಲ ಕೊಟ್ಟಿದ್ದಾರೆ.

ಬಂದೇ ಬಂತು. ಬಂದೇ ಬಿಟ್ಟಿತು. ಬಹುಬೇಗ ಬಂದಿತು. ಮುಗಿಲುಹಳ್ಳಿಯ ಜೈಹಿಂದ ದಂಗಲಿನಲ್ಲಿ ಜನ ಇರುವೆಯ ತಂಡದಂತೆ ತುಂಬಿದ್ದರು. ಬ್ಯಾಂಡು ಘೋರ್ಗರೆಯುತ್ತಿತ್ತು. ಪಂಚರು ಆಸನಾಸೀನರಾಗಿದ್ದರು. ಯು. ಬ. ಬಹದೂರ್ ಕೀ ಜೈ ಎಂಬ ಘೋಷಣೆ ಮೊರೆಯಿತು. ಬಹದ್ದೂರನನ್ನು ಹೊತ್ತುಕೊಂಡು (ಹೆಗಲ ಮೇಲೆ) ಅವನ ಶಾಗಿರ್ದುಗಳು ಬಂದರು. ಇತ್ತ ಮಸ್ತ್ ಖಲಂದರನೂ 'ಪೌಲಸ್ತ್ಯೋ ನರವಾಹನಃ' ಆಗಿ ಕಣಕ್ಕಿಳಿದ. ಕಾತರತೆ ತಾರಕಕ್ಕೇರಿತು. ಜಯಘೋಷ ರಷ್ಯದಲ್ಲೂ ಕೇಳಬಂತು.

ಪೈಲ್ವಾನರು ಮದದಾನೆಗಳಂತೆ ಕಣಕ್ಕೆ ಬಂದರು. ಮಟ್ಟಿಗೆ ಕೈ ಮಿಲಾಯಿಸಿ ಸಿಂಹದಂತೆ ಘರ್ಜನೆಮಾಡಿದರು. ಬಕಗಳಂತೆ ಒಬ್ಬರನ್ನೊಬ್ಬರು ದಿಟ್ಟಿಸಿದರು. ರೇಗಿದರು, ಕಣ್ಣು ಕೆಂಪಾಯಿತು. ಹಸಿದ ಹುಲಿಯಂತೆ ಛಂಗನೆ ಹಾರಿದರು. ಬಳಿಕ ಕಪ್ಪೆಗಳಂತೆ ಕುಪ್ಪಳಿಸಿ ಕೋಳಿಗಳಂತೆ ಕುಸ್ತಿ ಮಾಡಿದರು. ಸ್ವಲ್ಪಹೊತ್ತು ಮಲ್ಲಯುದ್ಧದನಂತರ ವಾಗ್ಯುದ್ಧಕ್ಕೆ ಆರಂಭವಾಯಿತು. ಖಲಂದರ್, ಬಹದ್ದೂರನನ್ನು ಚಿವುಟಿದ. ಬಹದೂರ್, ಖಲಂದರೂ ಮುಖ ಪರಚಿದ.

ಪೋಲೀಸರು ಕುಸ್ತಿ ಸಮವಾಯಿತು ಅಂದರು. ಮುಗಿಲುಹಳ್ಳಿಯವರು ಖಲಂದರನೇ ಗೆದ್ದ ಎಂದರು. ಸಂ. ಮ ಪರಿಷತ್ ಗೆದ್ದವನು ಬಹದ್ದೂರನೇ ಎಂದು ವಾದಿಸಿತು.

ಆದರೆ ಪ್ರೇಕ್ಷಕರಿಗೆ ಅತೀವ ನಿರಾಶೆಯಾಯಿತು. ಈ ಕಾಳಗಕ್ಕೆ, ಈ ಕುಸ್ತಿಗೆ ದುಡ್ಡು ತೆತ್ತೆವಲ್ಲಾ ಎಂದು ಕೊರಗುತ್ತಿದಾರೆ. ಉಜ್ಜಪ್ಪನ ತಲೆ ಕಂಡರೆ ಈಗ ಎಷ್ಟೋ ಜನಕ್ಕೆ ಆಗುವುದಿಲ್ಲ.

ಪಾಪ ಉಜ್ಜಪ್ಪ ಏನು ಮಾಡಿಯಾನು? ಜನರನ್ನು ಮೆಚ್ಚಿಸಲು ಜವಾಹರನಿಗೂ ಸಾಧ್ಯವಿಲ್ಲ. ಉಜ್ಜಪ್ಪ ಹೀಗೆ ಮಾಡಿದ್ದು ಜನರನ್ನು ಮೆಚ್ಚಿಸಲು ಅಲ್ಲ. ಹಾಗಾದರೆ ಏಕೆ?

ಮಸ್ತ್ ಖಲಂದರ್ ಮೂರು ಮಕ್ಕಳ ತಂದೆ. ಹಿರಿಯ ಮಗಳ ಷಾದೀಗೆ ಅವನ ಬಳಿಯಲ್ಲಿ ಹಣವಿರಲಿಲ್ಲ. ಅವನು ಉಜ್ಜಪ್ಪನ ಮೊರೆ ಹೊಕ್ಕ. ಉಜ್ಜಪ್ಪ ಈ ಕಾಳಗವನ್ನೇರ್ಪಡಿಸಿದ.

ಈ ಮಧ್ಯೆ ನಮ್ಮೂರಿನ ಚುನಾವಣೆ ನಡೆದಿದೆ. ಛಾ ಪಕ್ಷಕ್ಕೂ ಕಾಫೀ ಪಕ್ಷಕ್ಕೂ ತರಾತುರಿ ಸ್ಪರ್ಧೆ ನಡೆದು ಸಾವಿರಾರು ರೂಪಾಯಿಗಳ ವೆಚ್ಚದಿಂದ ಚುನಾವಣೆಯ ವೈಭವ ಅದ್ಧುರಿಯಾಯ್ತು. ಘೋಷಣೆ, ಪ್ರತಿಘೋಷಣೆ; ಪ್ರಪೊಗ್ಯಾಂಡ, ಅಪರ Anti; ಕ್ಯಾನ್ವಾಸ್, ಗೋಣಿತಟ್ಟು ಎಲ್ಲಾ ಭರದಿಂದ ಸಾಗಿತು.

ಆದರೆ ಕಾಲಾಪಾನಿ ಪಕ್ಷದ ಖಲಂದರ್ ಹಾಗೂ ಹುಚ್ಚಣ್ಣ, ಉಜ್ಜಪ್ಪನ ದಯೆಯಿಂದ ಮೂರುಕಾಸು ಖರ್ಚು ಇಲ್ಲದೆ ಆರಿಸಿಬಂದರು. ತೋಳ್ಬಲವೇ ಅವರನ್ನು ಕಡೆಹಾಯಿಸಿತು. Might is right ಎಂದವರು ನಂಬಿದ್ದಾರೆ.

ಸರ್ವ ಶ್ರೀ|| ಗಳಾದ ಹುಚ್ಚಣ್ಣ ಹಾಗೂ ಖಲಂದರ್ ಈಗ ತಮ್ಮ ವಸ್ತಾದ್ ಹಾಗೂ ಕುಸ್ತೀ ಪಿತಾಮಹ ಉಜ್ಜಪ್ಪನಿಗೆ ಸಾರ್ವಜನಿಕ ಸನ್ಮಾನ ಸಮಾರಂಭವನ್ನು ಏರ್ಪಡಿಸಿದ್ದಾರೆ. ಅದಕ್ಕಾಗಿ ನಮ್ಮೂರಲ್ಲಿ ಚಂದಾ ಎತ್ತಲಾಗುತ್ತಿದೆ. ನೀವೇನಾದರೂ ಮುಗಿಲಹಳ್ಳಿ ಸ್ಟೇಷನ್ನಿನಲ್ಲಿಳಿದು ಊರೊಳಗೆ ಬಂದರೆ ನಿಮ್ಮನ್ನು ಒಬ್ಬನು ಬಂದು ಚಂದಾ ಕೇಳುತ್ತಾನೆ. ನೀವು ಚಂದಾ ಕೊಟ್ಟುಬಿಡಿ ಎಂಬುದೇ ನನ್ನ ಬುದ್ಧಿವಾದ.

ಏಕೆಂದರೆ ನಿಮ್ಮನ್ನು ಚಂದಾ ಕೊಡಿ ಎಂದು ಕೇಳಿದವನು ಸಾಂಬ್ರಾಣಿ ಸಿದ್ಧಸ್ಯ (ಗಾಮಾನ ಮಾವ ಗುಂಗಾನ ಪಕ್ಕದ ಮನೆಯ ಪಂಜಾಬಿ ಶ್ರೀ|| ಗಜ್ನಫರನಿಗೆ ಮಣ್ಣು ತಿನ್ನಿಸಿ ತಣ್ಣೀರು ಕುಡಿಸಿದವ)ನೇ ಆಗಿರಬಹುದು.

— ಅ. ದಾ. ಸೇ



ಆ ವಾಸನೆ ನಾಯಿಗಳು, ಈ ತಿಂಡಿ ಪೆಟ್ಟಿಗೆ ನೋಡಿ ನನ್ನ ಹಿಂದೆ ಬಂದಿದ್ದಕ್ಕೆ, ನಾನೇ ಕೊಲೆಗಡುಕೀಂತಾ ಪೋಲೀಸ್ನೋರು ಹಿಡ್ಕೊಂಡು ಹೋಗಿದ್ರಲ್ಲಾಪ್ಪ, ನನ್ನ........

# ★ ಡಿಗ್ರೀಕಿಹಾಲತ್ ★

ಇಂದಿನ ಪದವೀಧರರ ಪರಿಸ್ಥಿತಿಯನ್ನು ಕುರಿತ ಒಂದು ತ್ರಿಭಾಷೆಯ ಹಾಡು.
"ನಾಸಿಕ್" ಚಿತ್ರದ "ದೇಖ್ ತೇರಿ ಸಂಸಾರಕಿಹಾಲತ್" ಧಾಟಿಯನ್ನನುಸರಿಸಿ

ದೇಖ್ ತೇರೇ ಡಿಗ್ರೀಕೀಹಾಲತ್ ಕ್ಯಾ ಹೋಗಯಿ ಹರ್‌ಬಾರ್
ಕಿತನಾ ಬದಲ್‌ಗಯಾ ಸರಕಾರ್ | ಕಿತನಾ........
ಕಾಲೇಜ್ ನ ಬದಲಾ ಸಬ್ಜೆಕ್ಟ್ ನ ಬದಲಾ | ನಾ ಬದಲಾರೇ ಪ್ರೊಫೆಸರ್ |
ಕಿತನಾ ಬದಲ್‌ಗಯಾ ಸರಕಾರ್ | ಕಿತನಾ........

ಲೇ ತೇ ಸಮಯಪರ್ ಎಷ್ಟೊಂದ್ ಜಂಭಾऽ |
ಲೇಕೆ ಹುಯೇಬಾದ್ ಬನಾ ತೂ ಮಂಗಾऽ |
ಕಹೀಪೆ ಗಿರವೀ ಕಹೀಪೆ ಸಾಲಾऽ |
ನಾಚ್‌ರಹಾ ಬಾಪ್ ಹೋಕರ್ ಕಾಲಾऽ |
ನಡಿಇನ್ನು ಬಳುಕುತ ಪಿ. ಎಸ್. ಸೀ.ಗೆ ಇಂಟರ್ ವ್ಯೂಪರ್ |
ಕಿತನಾ ಬದಲ್‌ಗಯಾ ಸರಕಾರ್ | ಕಿತನಾ ....
ದೇಖ್ ತೇರೆ........

ಮದ್ರಾಸ್ ಬಾಂಬೆಯ ಬಳಸಿಯು ಬಂದೇ೯೯ |
ಆರ್ಡರ್ ಕಾಯುತ ದಿನವೂ ನಿಂದೇ೯೯ |
ಬೀ.ಏ. ಎಂ.ಏ. ಎಲ್ಲಾ ಒಂದೇ೯೯ |
ಇನ್‌ಫ್ಲೂಯೆನ್ಸ್ ಇಲ್ಲದೇ ಬರಿದೇ ನಿಂದೇ |
ಇನ್ನೇನೂ ದಾರಿ ತೋರದೆ ಹೋಚ್ರೆ ಬನ್‌ಜಾವ್ ಹೋಟೆಲ್ ಸರ್ವರ್ |
ಕಿತನಾ ಬದಲ್‌ಗಯಾ ಸರಕಾರ್ | ಕಿತನಾ........
ದೇಖ್ ತೇರೆ........

ಜೋ ತುಮ್ ಡಿಗ್ನಿಟಿ ಛೋಡ್‌ಕೆ ನ ಉತ್ತರೇ |
ಬನ್ ತೇಹೋ ಪಾಗಲ್ ಮೈಂಡ್ ಬಿಗಡ್ತೇ |
ಸಾರೇ ಮಿಲ್‌ಕೇ ಕಾಲೇಜ್ ಉಝುಡ್‌ಕೇ |
ಕ್ಯೋಂ ಕಿ ವಂಹಾಸೆ ಬಹರ್ ನಿಕಲ್‌ಕೇ |
ಸೂಟ್ ಬೂಟ್ ಪರ್‌ಕ್ಯೋಂ ಜಾತೇಹೋ ಡಿಯರ್ ಗ್ರಾಜುಯೇಟ್ ಸರ್ |
ಕಿತನಾ ಬದಲ್‌ಗಯಾ ಸರಕಾರ್ | ಕಿತನಾ........
ದೇಖ್ ತೇರೆ........

—ಮು. ಸೋ. ಶರ್ಮ.

# ಕೆಲಸವಿಲ್ಲದ ಬಡಗಿ

ಬಹಳ ದಿನಗಳಿಂದ ನನಗೊಂದು ದೊಡ್ಡ ಆಶೆ – ಯಾವುದಾದರೊಂದು ಹೊಸಾ ಹೊಸ ವಿಷಯಾನ ಥೆಲೋದಾಗಿ ಬಗೆದು ನಮ್ಮ ಸಂಪಾದಕರಿಂದ – ಭೇಷ್ ! ಅನಿಸಿ ಕೊಳ್ಳಬೇಕೆಂದು ! ಅದಕ್ಕಾಗಿ ಎಷ್ಟೋಬಾರಿ ಎಂಥೆಂತದೋ ಕಾಗದಗಳನ್ನೆಲ್ಲಾ ನನ್ನ ಮುಂದಿಟ್ಟುಕೊಂಡು, ಎಂಥೆಂತದೋ ಪೆನ್ನುಗಳನ್ನೆಲ್ಲಾ ಎರವಲು ಪಡೆದು ಕೈಲಿ ಹಿಡಿದುಕೊಂಡು, ಎಷ್ಟೆಷ್ಟೋ ಘಂಟೆಗಳ ಕಾಲ ಕುಳಿತಿದ್ದೇನೆ – ಊಹು ! ಸುತರಾಂ ಪ್ರಯೋಜನವಿಲ್ಲ. ಹೊಸ ವಿಷಯ ಹೊಳೆಯುವುದಿರಲಿ – ತಲೆಯಲ್ಲಿದೆ ಎಂದು ನಾನು ತಿಳಿದಿದ್ದ ಬುದ್ಧಿ ಕೂಡ ಅಳಿಸಿಹೋಯಿತು. ಹೀಗೆಂದರೆ ನನ್ನಾಕೆ ಒಪ್ಪೊಲ್ಲ – ನನಗೆ ಬುದ್ಧಿಯೇ ಇಲ್ಲ ಅಂತ ಆಕೆಯ ತಾಯಿ ಸ್ಪಷ್ಟವಾಗಿ ಹೇಳಿಬಿಟ್ಟಿದ್ದಾರಂತೆ. ಇವತ್ತು ಮೊಂಡಾಟ ಹಿಡಿದು – ಏನೇ ಆಗಲಿ, ಎಷ್ಟೇ ಹೊತ್ತಾಗಲಿ – ಯಾವುದಾದರೊಂದು ಹೊಸ ವಿಷಯ ಬರೆವೇ ಬರೆದೇನು. ಸಂಪಾದಕರಿಂದ........ಆಗಲಿ ನೋಡೋಣ.

ಕಾಲು ಘಂಟೆಯಾಯ್ತು. ನನ್ನ ಕೈ ಉಗುರುಗಳೆಲ್ಲಾ ಖಾಲಿಯಾದವು. ತಲೆಯೂ ಖಾಲಿ. ಎಲ್ಲೋ ಓದಿದ ಜ್ಞಾಪಕ – ಏನೋ ತಿಂದರೆ ಮೆದುಳು ಚುರುಕಾ ಗುತ್ತಂತೆ. ಏನದು? Yes-Wode house! It seems sardines are good for the brains jeeves. Go and have a couple and come back and report! ಹಾಳು ಮೀನು – ನಾನೆಲ್ಲಿ ತಿನ್ನಲಿ? ಈ ವಯಸ್ಸಿನಲ್ಲಿ? ಅದೂ ಮನೆಯಲ್ಲಿ? ಅದೂ ಮಟಮಟ ಮಧ್ಯಾಹ್ನದಲ್ಲಿ? ಅದೂ ನನ್ನತ್ತೆ ಮತ್ತು ನನ್ನಾಕೆ ಒಟ್ಟಿಗೆ ನನ್ನ ಮೇಲೆ ಹೊಂಚುಹಾಕುತ್ತಿರುವಾಗ? ಇಲ್ಲ— ಮೀನಿನ ಯೋಚನೆ ಕೂಡ ಮಾಡೋ ಹಾಗಿಲ್ಲ. ಏನೋ – ಒಂದುವೇಳೆ ಬಯಕೆ ಆದರೆ ನಮ್ಮ ಡಾಕ್ಟರು ಹೇಳಿದರೂಂತ ಮೀನು ಎಣ್ಣೆ ಕುಡಿಯಬಹುದು – ಆದರೆ ಆದರಿಂದ ಮೆದುಳು ಚಿಗುರುತ್ತೋ ಇಲ್ವೋ ಗೊತ್ತಿಲ್ಲ – ಅಥವಾ ಮೀನಿನ ಮೆದುಳೇ ನಮಗೂ ಬರುತ್ತೋ ! ಒಂದುವೇಳೆ ಹಾಗೇ ಯಾರಿಗೂ ತಿಳಿಯದ ಹಾಗೆ ಮಿಲಿಟರಿ ಹೋಟೇಲಿಗೆ ಹೋಗಿ ಮೀನು ತಿಂದು ಬರಲೇ? ಅದು ಜೀರ್ಣವಾದರೆ ಸರಿ – ಇಲ್ಲ ದಿದ್ದರೆ ಅದು ಮೆದುಳನ್ನು ಹೇಗೆ ಹದಾ ಮಾಡೀತು? ಮೀನಿನ ಯೋಚನೆ ಬಿಡೋದು ಕ್ಷೇಮ. ಅವಳನ್ನು ಕೇಳಲೇ? ಅಗೋ ಕಾಫಿ ತಂದಹಾಗಿದೆ—

" ಏನೇ ಕಾಫಿ ತಂದ್ಯಾ ? "

" ಕಾಫಿ? ಇನ್ನೂ ಕಾಲಘಂಟೆಯಾಗಿಲ್ಲ. ಏನೋ ಬರೀಬೇಕು ಅಂತ ಒಂದು ಚೊಂಬು ಕಾಫಿ ಬಸ್ಕೊಂಡು ಬಂದ್ರೀ – ಈಗೆಲ್ಲಿಂದ ತರ್ಲಿ? ಬೇಕಾದರೆ ಕುಡೀರಿ— ಇದು ಹರಳೆಣ್ಣೆ– ತಿಗಣೆ ಜಾಸ್ತಿ ಅಂತ ಮಂಚಕ್ಕೆ ಹಚ್ಚೋಣಾಂತ ತಗೊಂಡು ಹೋಗ್ತಾ ಇದ್ದೀನಿ"

" ಆದಿರಲಿ ಬಿಡು – ಏನಾದರೂ ಒಂದು ಹೊಸಾ ವಿಷಯ ಹೇಳು ಮತ್ತೆ— ಈ ಸಾರಿ ಒಂದು ಫೆಲೋ ಲೇಖನ ಬರೆದು ಬಿಟ್ಟು ನಮ್ಮ ಸಂಪಾದಕರ ಕೈಲಿ ಭೇಷ್ ತಕೋಬೇಕು – ನೋಡೇ – ಯೋಚನೆ ಮಾಡು"

" ನಮ್ಮ ತಾಯೀನ ಕೇಳ್ಳೇಂದ್ರೆ?"

" ಹೋಗು–ಮಂಚಾನ ವಿಚಾರಿಸ್ಕೋ ಹೋಗು!" ಒಂದುಬಾರಿ ಟಿ ಯಸ್. ಬಾಲಯ್ಯನ ಹಾಗೆ ನನ್ನನ್ನು ದುರುಗುಟ್ಟಿ ನೋಡಿ ಹೊರಟಳು.

ಮತ್ತೂ ಕಾಲು ಘಂಟೆಯಾಯ್ತು– ಮೇಲಿದ್ದ ಎರಡು ಹಾಳೆಗಳು ಕೈ ಬೆವರಿನಿಂದ ಹಾಳಾಗಿದ್ದವು – ಬಿಸಾಡಿದೆ. ಪಕ್ಕದಮನೆ ವಿಶಾಲಾಕ್ಷಮ್ಮ ಬಂದರು.

" ಇಧಾರೆಯೇ – ಪದ್ದಮ್ಮ?"

"…. ………………… .. "

" ಇಧಾರೆಯೇ?"

" ಇಧಾರೆ–ಒಳಗಿದ್ದಾರೆ–ಮಂಚಕ್ಕೆ ಹರಳೆಣ್ಣೆ ಹಚ್ತಾ ಇಧಾರೆ–ಹೋಗಿ… "

ಹಲ್ಲು ಕಚ್ಚಿಕೊಂಡು ತಡೆದೆ – ಪಾಪ ವಿಶಾಲಾಕ್ಷಮ್ಮ ಏನಂದುಕೊಂಡರೋ ಏನೋ ತಲೆ ಬಗ್ಗಿಸಿ ಮುಗುಳುನಗೆ ನಗುತ್ತಾ ಒಳಗೆ ಹೋದರು.

ಹತ್ತುನಿಮಿಷ ಹಾಗೇ ಕುಳಿತೆ.

" ಓಹೋ – ಬನ್ನೀ ವಿಶಾಲಾಕ್ಷಮ್ಮ"

" ಪದ್ದಮ್ಮ– ಸ್ವಲ್ಪ ಕಾಫೀಪುಡಿ ಇದ್ರೆ ಕೊಟ್ಟಿರಿ – ಒಂದೇ ಒಂದು ಸೌಟು— ಸಾಯಂಕಾಲ ತರ್ತಾರೆ–ಕೊಡತೇನೆ. ಆದಿರಲಿ–ನೀವೇನ್ ಮಾಡ್ತಾ ಇದ್ರಿ ಹೇಳಿ?"

ನನ್ನ ಉಸಿರು ಹಾಗೇ ನಿಂತಿತು.

" ಯಾಕೆ ವಿಶಾಲಾಕ್ಷಮ್ಮ?"

" ಅಲ್ಲಾ– ನಿಮ್ಮೋರು ಹೊರಗೆ ಕೂತಿದ್ರು– ನಾನು ಕೇಳಿದ್ದಕ್ಕೆ– ಮಂಚಕ್ಕೆ ಹರಳೆಣ್ಣೆ ಹಚ್ತಾ ಇದ್ದೀರಿ – ಅಂತ ಹೇಳಿದ್ರು"

ಉಸಿರು ಪುನಃ ಆಡಿತು. ಆದರೂ ನನ್ನ ಹತ್ತೋಟಿಯಲ್ಲಿರಲಿಲ್ಲ.

"ಸರಿ – ನಮ್ಮೋರ ಮಾತು ಬಿಡಿ – ಅವರ ತಲೇಲಿ ಏನೋನೋ ತುಂಬಿ ಕೊಂಡಿರ್ತಾರೆ – ಪ್ರಾಯಶಃ ಯಾವುದೋ ಕಾಗಕ್ಕನ ಕಥೆ ಬರೀತಾ ಇದ್ದಾರೋ ಏನೋ!"

ಸಧ್ಯ – ನಾನು ಭಯ ಬಿದ್ದಷ್ಟು ಉಗ್ರವಾಗಲಿಲ್ಲ! ಮತ್ತೆ ಅದೇ ಪ್ರಶ್ನೆ! ಏನು ಬರೆಯಲಿ?

"Hello – ಕೇಫ್!"

ತಿರುಗಿದೆ. ಯೆಂಕು!

"ಬಾ – ಯೆಂಕು"

ಬಂದ.

"ಏನೋ ಅದು? ಓಹೋ–ನಿನ್ನ usual rubbish? ಏನು ಬರೀತಿದ್ದಿ?"

"ಲೋ ಯೆಂಕು – ನಿಜವಾಗಿ ಹೇಳೋ – ಈ ಸಾರಿ ಏನಾದರೂ ಒಂದು ಸೊಗಸಾದ ಲೇಖನ ಬರೀಬೇಕೂಂತ ಕೂತಿದ್ದೇನೆ – ನೀನಾದರೂ ಒಂದು subject ಹೇಳು ಮತ್ತೆ?"

"ಹಾಗಿದ್ದ ಮೇಲೆ–why not–ಮಸಾಲೆದೋಸೆ ಮೇಲೆ ಯೋಚಿಸೋಣ?"

"Dammit! I can't. ನಮ್ಮ ಸಂಪಾದಕರಿಗೇ ಮಸಾಲೆದೋಸೆ ಅಂದ್ರೆ ಬೇಜಾರಾಗಿರಬೋದು – ಇನ್ನು ಅದೇ ವಿಷಯ ನಾನೂ ಬರೀಲೇ? ತಿಂದು ಜೀರ್ಣ ಮಾಡಿಕೊಳ್ಳಲಿ – ಓದಿ ಜೀರ್ಣಮಾಡಿಕೋ ಅಂದರೆ ಯಾವ ನ್ಯಾಯವಯ್ಯ – ಬೇರೆ ವಿಷಯ ಹೇಳು ನೋಡೋಣ"

"ಹುಷ್ಷಪ್ಪ! ನೀನು ಬರಹಗಾರನಾಗಿದ್ದಕ್ಕೆ ಸಾರ್ಥಕವಾಯ್ತು — ನಾನು ಹೇಳಿದ್ದು–ಮಸಾಲೆದೋಸೆ ತಿನ್ನೋಣ – ತಿನ್ನೋವಾಗ ಯಾವುದಾದರೂ subject ತಾನಾಗೇ ಹೊಳೆಯುತ್ತೆ – ಅಂತ. ಮಂಕೆ – ಇಷ್ಟು ತಿಳೀಬೇಡ್ವೆ?"

of course–ಅವನ ಮಾತು ಅರ್ಥವಾಗಿತ್ತು. ಆದರೂ ಒಂದು escape–ಪ್ರಯತ್ನಮಾಡಿದೆ!

"ನೋಡು ಯೆಂಕು–ಆಮೇಲೆ ಮಸಾಲೆದೋಸೆ ತಿನ್ನಿಸ್ತೇನೆ–ಈಗ ಏನಾದರೂ subject ಮಾಡಯ್ಯಾ"

"ಹಾಗಾದ್ರೇ–ನಗು ಬರೋ ಅಂಥಾದ್ದೋ?"

ಪರವಾಗಿಲ್ಲ–ಹಾಸ್ಯವಾಗಿಯೇ ಇರಲಿ"

"ರಾಜಕೀಯ?"

"ಇದ್ದರೂ ಇರಲಿ"

" ? ! ? ! "

" !.... .. . ........?"

" ? ? ? ? ? "

" ! ! ! ! ! ! "

ಏನೂ ಪ್ರಯೋಜನವಾಗಲಿಲ್ಲ.

"ನಾನು ಸಾಯಂಕಾಲ ಬರ್ತೇನಯ್ಯ - wish you good luck"

ಯೆಂಕು–phunku! ಹೊರಟ್ಹೋದ. ಈಗ 45 ನಿಮಿಷವಾಯ್ತು.

"ಏನಾದ್ರೂ ಬರದರಾಂದ್ರೆ?"

"ಏಕೇ–ಏನಾದರೂ ವಿಷಯ ಹೇಳ್ತೀಯೇನು?"

"ವಿಶಾಲಾಕ್ಷಮ್ಮ ಬಂದಿದ್ರು – ಕಾಫಿಪುಡಿ ಇದ್ದದ್ದನ್ನ ಕೊಟ್ಟುಬಿಟ್ಟೆ – ಈಗ ತಂದರೆ ಉಂಟು. ಅಲ್ಲಾಂದ್ರೆ – ಆಕೆ ಹತ್ರ ನಾಚಿಕೆ ಇಲ್ದೆ ಮಂಚಕ್ಕೆ ಹೆರಳೆಣ್ಣೆ ಹಚ್ತಾ ಇದ್ದೇನೇಂತ ಹೇಳಿಬಿಡೋದೆ?"

Critical houroo!

"ನಾ–ಹಾಗೆ ಹೇಳಿದೆನಂತೇ?"

"ಇಲ್ಲಾ ಪಾಪ–ಹೋಗೀಂದ್ರೆ–ಏನಾದ್ರೂ ಸಾರ್ಥಕವಾಗಿ ಮಾಡೋದುಬಿಟ್ಟು ಮೂರು ಹೊತ್ತೂ ಹೀಗೆ ಬರೀಬೇಕೂಂತ ಕುಕ್ಕರಬಡಿದಿದ್ರೆ–ತಲೇಲಿ ಹೇಗೆ ಬುದ್ಧಿ ಇರ್ಬೇಕು?"—

—ನಿಷ್ಕ್ರಮಣ

ಮೂರು ಜನ ಬಿಕ್ಷುಕರು, ಐದು ಜನ "ಯಾವುದಾದರೂ ಸಾಮಾನ್ ತಕೊಳ್ಳಿ ದೋ ದೋ ಆನಾಮೇ*–ಗಳನ್ನ ಓಡಿಸುವ ಹೊತ್ತಿಗೆ ಸಾಯಂಕಾಲವಾಯ್ತು.

"Hullo-ಕೇಫ್"

"ಬಾ–ಯೆಂಕು"

"Time for cafe - ಕೇಫ್! ವ್ಹಾ - I am better than you! ನಿಂತಲ್ಲೇ ತಕೋ - Rhyme - poem! I am better than even a............ dammit!"

ಎದ್ದು ಹೊರಟೆ–ದಾರಿಯಲ್ಲಿ ಇದನ್ನು ಅಂಚೆ ಡಬ್ಬದಲ್ಲಿ ಹಾಕಿ, ಆನಂದಕೆಫೆಗೆ ನುಗ್ಗಿದೆವು.

— "ಕೇಫ".

# ದಫೆದಾರ್ ದೇರಣ್ಣೊರು

## " ಶ್ವಾನ ಶಾಸ್ತ್ರ"

ನಾನು ಬಂದು ಎದುರಿಗೆ ನಿಂತದ್ದೂ ಅವರಿಗೆ ಗೊತ್ತಾಗಲಿಲ್ಲ. ತದೇಕ ಚಿತ್ತದಿಂದ ಜಗುಲಿಯ ಮೇಲೆ ಕುಳಿತು ಎದುರಿಗೆ ಗಮಘಮಿಸುವ ಪಕೋಡದ ತಟ್ಟೆ ಇಟ್ಟುಕೊಂಡಿದ್ದರು. ಒಂದನ್ನು ಬಾಯಿಗೆಸೆದರೆ– ಮತ್ತೊಂದನ್ನು ಮೇಲೆ ಎಸೆಯು ತ್ತಿದ್ದರು. ಅಂತರಿಕ್ಷದಲ್ಲೇ ಆ ಪಕೋಡವನ್ನು ಹಾರಿ ಹಿಡಿದು ತಿಂದೀತು ಎದುರಿಗೆ ಕುಳಿತ ಜಿಮ್ಮಿ ಎಂದು ಭ್ರಮಿಸಿ ಚಿತ್ತವನ್ನೆಲ್ಲಾ ಅತ್ತಲೇ ವಿನಿಯೋಗಿಸಿದ್ದ ದ|| ದೇರಣ್ಣನವರಿಗೆ ನಾನು ಬಂದದ್ದು—ಎದುರಿಗೆ ನಿಂತದ್ದು ಹೇಗೆ ಗೊತ್ತಾಗಬೇಕು? ನವಿರಾಗಿ ಒಮ್ಮೆ ಕೆಮ್ಮಿದೆ.

ತೀಕ್ಷ್ಣವಾಗಿ ನನ್ನೊಮ್ಮೆ ನೋಡಿ—"ಮುಂದಕ್ಕೆ ಹೋಗಿಬಾರಪ್ಪಾ"—ಎಂದು ಭಿಕ್ಷುಕನನ್ನು ಅಟ್ಟುವಂತೆ ಹೇಳಿದರು. ನನಗೆ ನಖಶಿಖಾಂತ ಕೋಪ ಬಂತು. ಬಾರದೆ ಉಂಟೇ—ನಾನೇನು ಭಿಕ್ಷಕ್ಕೆ ಬಂದಿದ್ದೆನೇ!

"ಸ್ವಾಮಿ ನಿಮಗೆ ನನ್ನ ಮಾತು—ಸ್ನೇಹ ಬೇಡದಿದ್ದರೆ—ಹಾಗಂತ ಹೇಳಿ —ಹೀಗೆ ಅವಮಾನ ಮಾಡಬಾರದು."

"ಬನ್ನಿ ಹೀಗೆ ಕೂಡಿ—ಪರೀಕ್ಷೆಮಾಡಿದೆ ನಿಮಗೆ ಸಿಟ್ಟು ಬರುತ್ತದೋ ಇಲ್ಲವೋ ನೋಡೋಣಾಂತ" ಎಂದು ಸಮಾಧಾನದ ಸುಪ್ಪಿ ಹಾಡಿದರು.

—ಬಡಕಲು ನಾಯಿ ಕೂದಲು ಅಲ್ಲಲ್ಲಿ ಉದುರಿ ಬರೀ ಸೀಕಲು ಪಕೋಡ ತಿಂದು ಆ ಸ್ಥಿತಿಗೆ ಬಂದಿರಬಹುದೆಂಬ ಗುಮಾನಿಯಿಂಥ ಕೆಟ್ಟದಾಗಿ ಆ ಶುನಕನನ್ನು ನೋಡಿ ಕುಳಿತೆ.

"ಹಾಗೆ ನೋಡಬೇಡ್ರಿ ...ಇದು ನನ್ನ ಸರ್ವೀಸಿನಲ್ಲಿ ಮೂರನೇ ನಾಯಿ."

"ಇದಕ್ಕೆ ಹಿಂದೆ ಎರಡು ಇದ್ದವೇನು?"

"ಒಂದು ಇನ್ನೂ ಇದೆ—ಎರಡನೇದು ಸತ್ತು ಹೋಯಿತು."

"ಒಂದು ಇನ್ನೂ ಇದೆಯೆ?....ಆಶ್ಚರ್ಯ ಒಂದುದಿನವೂ ಕಾಣೆನೇ...."

"ಹ ಹ ...ಒಂದನೇ ನಾಯಿ ನನ್ನ ಭಾವಮೈದ ಸಾವಂತ್ರಿ ತಮ್ಮ....ಸಧ್ಯಕ್ಕೆ ಬಾಗೂರಲ್ಲೇ ಇದ್ದಾನೆ... "

"ಹ ಹ್ಹ ಹ ಹ್ಹ .... ನಾನು ಏನಪ್ಪಾಂತಿನಿ....ಏನು ದೇರಣ್ಣೋರೆ ಹೆಂಡ್ತಿ ತಮ್ಮಾನ್ನೊ ಅಭಿಮಾನ ಕೂಡ ಬೇಡವೇ...."

"ಬೇಕು ಸ್ವಾಮಿಾ....ನಿಜ ನಾನು ಅಂದಿದ್ದರಲ್ಲಿ ಏನು ತಪ್ಪಿದೆಯೋ ನೀವು ಹಾಗೆ ಪಶ್ಚಾತ್ತಾಪ ಪಡೋಕೆ ಅರ್ಥವಾಗಲಿಲ್ಲ—ಒಳ್ಳೆ ಬೇಟೆ ನಾಯಿ ನಮ್ಮ ದತ್ತಾತ್ರೇಯ. ನಾಯಿಗಿರೋ ನಿಯತ್ತಿದೆ ಅವನಿಗೆ."

—ನಾನು ಸುಸ್ತಾದೆ. ಪಕ್ಕದಲ್ಲಿದ್ದ ಕಂಚಿನ ಚೊಂಬಿನಿಂದ ಲೋಟಕ್ಕೆ ಹಸನಾದ ತಿಳಿನೀರು ಸುರಿದು ನನ್ನ ಮುಂದಿಟ್ಟರು.

"ಕುಡೀರಿ ನೀರ .. ಜನಾ ನಾಯಿ ಅಂತಂದ್ರೆ ಅದ್ಯಾಕೆ ವಂಡ್ರಕಣ್ಣಲ್ಲಿ ನೋಡಿ ನಾಯೀಂದ್ರೆ ನಿಕೃಷ್ಟವಾಗಿ ನೋಡ್ತಾರೋ ನನಗೆ ಅರ್ಥವಾಗ್ತಿಲ್ಲ....ಕ್ಷಮಿಸಿ ನನಗೆ ಶ್ವಾನ ಭಾಷೆ ಬರುತ್ತೆಂದ್ರೆ ನಿಮಗೆ ಆಶ್ಚರ್ಯವಾಗಬಹುದು...."

"ಆಂ....ಶ್ವಾನ ಭಾಷೆ?....ನಿಮಗೆ ಗೊತ್ತೆ .. "

ಆಶ್ಚರ್ಯಪಡೋ ವಿಚಾರವೇ....ನಾನೇ ಕಿವಿಯಾರ ಅನೇಕ ಸಲ ನಾಯಿಗಳು ಮಾತಾಡ್ತಾ ಇರೋದು – 'ಹಾಳು ಮನುಷ್ಯರ ಹಾಗೆ ಮೋಸ ಮಾಡಬೇಡ' 'ಉಂಡ ಮನೆಗೆ ಎರಡು ಬಗೆಯೋಕೆ ನಾನೇನು ಮನುಷ್ಯನೇನು?' 'ಶುದ್ಧ ಮನುಷ್ಯರ ಗುಣ ಈ ನಾಯಿದು' ಎಂದು ತಮತಮಗೆ ನಾಯಿಗಳು ಮಾತಾಡಿದ್ದು ಈ ಕಿವಿ ಅನೇಕಬಾರಿ ಕೇಳಿದೆ...."

"ದಫೆದಾರ್ರೇ ನೀವು ಹಿಂದೆ ಹುಲಿ ಷಿಕಾರಿ ಕಥೇ ಹೇಳಿದಾಗ ಕರಡಿ – ಹುಲಿ ಕೈಲಿ ಮಾತಾಡಿಸಿದ್ದಿರಿ – ಈಗ ನಾಯಿ ಭಾಷೆ ವಿಚಾರ ಹೇಳೋದು ಹೆಚ್ಚಿನದೇನಲ್ಲ"

"ಇದಕ್ಕೇ ನನಗೆ ಕೋಪ ಬರೋದು – ಹುಲಿ ಶಿಕಾರಿ ವಿಷಯ ನಡೆದದ್ದು ಕಥೆ ಹಾಗೆಯೇ ಹೊರ್ತು ಅದು ಕಥೆಯಲ್ಲ – ಈಗ ಈ ನಾಯಿ ವಿಷಯವೂ ಹಾಗೇ...."

—ಎದುರಿಗೆ ಕುಳಿತ ಪುಳಿಚಾರಿ ನಾಯಿ ಏನೋ ಅರ್ಥ ಬರುವ ನೋಟದಿಂದ ದಫೆದಾರರನ್ನು ನೋಡಿತು. ಈ ಹುರುಕಲು ನಾಯಿಯನ್ನು ಆಲ್ಸೇಷಿಯನ್ನೋ ಅನ್ನುವ ಅಭಿಮಾನದಿಂದ ಪಕೋಡ ತಿನ್ನಿಸುತ್ತಿದ್ದ ದಫೆದಾರರ ಶ್ರದ್ಧೆ ನೋಡಿ ನನಗೆ ನಗುಬಂತು.

ನಗೋ ವಿಚಾರಕ್ಕಲ್ಲ. ಈ ನಾಯಿಗಳು ಸಾಮಾನ್ಯವಲ್ಲ. ಮೊದಲಿನ ನಾಯಿ ದತ್ತಾತ್ರೇಯಾಂತ ನನ್ನ ಭಾವಮೈದಾ ...ಅಯ್ತಾ ಇನ್ನು ಎರಡನೆ ಶುನಕಸ್ವಾರು? ಅಂತ ನೀವು ಪ್ರಶ್ನಿಸಬಾರದೆ?"

"ಹಾ....ಹೌದು ಮರ್ತಿದ್ದೆ. ಎರಡನೇ ನಾಯಿ ಯಾವುದು?"

—ಎಂದು ಕೇಳಿದಾಗ ಶ್ರೀಯುತರು ಪೇಟ ಇಳಿಸಿದರು. ಎದುರಿಗಿನ ಕುರ್ಚಿಯನ್ನು ಬದಿಗೆ ಸೆಳೆದು ನೇವರಿಸಿದರು. ಕಣ್ಣು ತೇವಗೊಂಡವು. ಮುಖದಲ್ಲಿ ದೂರ ಬಹುದೂರ ಹೋಗಿರುವ ಪ್ರಿಯತಮೆಗೆ ಮೇಘದೊಡನೆ ಸಂದೇಶ ಕಳಿಸಿದ ಯಕ್ಷನ ಕಳೆ ಮೂಡಿತು. ಹೇಳಿ ಕೇಳಿಸಿಕೊಂಡ ಪ್ರಶ್ನೆಗೆ ಮರುಗಿ ಮುದುಡಿ ಕುಳಿತರು. ಗದ್ಗದ್ರೂಪ ಗಂಟಲಲ್ಲಿ ಗೊಣಗಿದರು ದೇರಣ್ಣನವರು.

"ನಾನೇ ಆ ನಾಯಿಯ ಬಗ್ಗೆ ವಿಷಯ ಕೆದಕಬಾರದಿತ್ತು....ಆ ನಾಯಿಯೇ ನನಗೆ ಸಾವಂತ್ರಿ ಧೊರಕುವಂತೆ ಮಾಡಿದ್ದು...."— ಎಂದು ಕಣ್ಣೊರಿಸಿಕೊಂಡರು.

"ಯಾಕೆ ಸ್ವಾಮಿ ಹೆಂಗಸರ ಹಾಗೆ ಅಳ್ತೀರಾ"

"ಹೆಂಗಸರ ಹಾಗೆ ಅಳ್ತಿಲ್ಲರೀ .. ನಮ್ಮ ಹೆಂಗಸರ ಕಠೋರ ಹೃದಯ ಕಂಡು ಕಣ್ಣೀರು ಇಡ್ತಾ ಇದ್ದೀನಿ...."

"ಸಾವಂತ್ರಮ್ಮನೋರು ಅಪರಂಜಿ ಅಂಥ ಹೆಂಗ್ಸ್ರಂತ ನಮ್ಮ ಹೆಂಡ್ರು ಹೇಳ್ತಾರೇ"

"ನಿಜ....ಆದರೆ ಬೀರಣ್ಣ ಹುಟ್ಟಿ ಹನ್ನೆರಡು ತಿಂಗಳಾದರೂ ನನ್ನ ಮನೆಗೆ ಬರ್ಲಿಲ್ಲ....ನಾನು ಸಬ್‌ಇನ್ಸ್‌ಪೆಕ್ಟರಾಗೋತನಕ ಬರೋಲ್ಲಾಂತ ಸಾವಂತ್ರಿ ಶಪಥ ಮಾಡಿ ಹೋದಳು. ಬಾಗೂರಿಂದ ಬರೋದೇ ಇಲ್ಲಾಂತ ಇದ್ದಾಳೆ...."

"ಇದು ನೀವು ನೀವು ಗಂಡ ಹೆಂಡ್ರ ಜಗಳ ನಾವು ತಲೆಹಾಕಬಾರದು .. ಆದರೂ ನೀವು ಹೇಳಿದ ಎರಡನೇ ನಾಯಿ ಈ ವಿಚಾರದಾಗೆ ಹೆಂಗೆ ಸಹಾಯಮಾಡ್ತೊನ್ನೋದು ನನಗೆ ಬೇಕಾಗಿದೆ"

"ಅವತ್ತು ಸಂಜೆ ಬಾಗೂರಲ್ಲಿ ಬಂದೂಕ ಹಿಡಿದು ಉಲಿ ಶಿಕಾರಿಗೆ ಮುಂದೆ ಟಿಪ್ಪುವನ್ನು ಬಿಟ್ಟುಕೊಂಡು ಹೊರಟಿದ್ದೆ ...ಏನು ಮಾಡಿದರೂ ಆ ನಾಯಿ ಕಾಡುದಾರಿ ಹಿಡಿಯಲಿಲ್ಲ - ಕೆರೆದಾರಿ ಹಿಡಿತಿತ್ತು. ಹೆದರಿಸಿ ಬೆದರಿಸಿದೆ - ಆದರೂ ಕಾಲು ಕೆರೆದು ಧೂಳು ಎಬ್ಬಿಸಿ - ಕೂಗಿ ಎಳೆದು ಗಲಾಟೆ ಮಾಡಿತು. ಹಾಳಾದ್ದು ಎಲ್ಲಿಗೆ ಕರ್‍ಕೊಂಡು ಹೋಗುತ್ತೊ ನೋಡೇ ಬಿಡೋಣವೆಂದು ಅದನ್ನೇ ಹಿಂಬಾಲಿಸಿದೆ. ಆಗ ಅದರ ಮುಖದಲ್ಲಿನ ಕಳೆ ನೋಡಬೇಕಿತ್ತು-ಅರ್ಜುನನಿಗೆ ಸುಭದ್ರೆ ಕಂಡಳೇನು? ಮನ್ಮಥನಿಗೆ ರತಿ ಕಂಡಳೇನು? ಶಿವಣ್ಣನಿಗೆ ಪಾರಕ್ಕ ಕಂಡಳೇನು? ಅಲ್ಲ ದ|| ದೇರಣ್ಣನವರಿಗೆ ಸಾವಂತ್ರಿ ಕಂಡಳು"

—ಎಂದು ಹೇಳಿ ಹಣೆಮೇಲಿನ ಬೆವರೊರಸಿ ಮೀಸೆ ತೀಡಿ ಒಂದೇ ಪಕೋಡ ಹದವಾಗಿ ಅಗಿದು ಕಂಪನ್ನು ಅನುಭವಿಸಿದರು. ಅನುಭವಿಸಿ ಹೇಳಿದರು—

"ನೋಡಿದಿರಾ ನಾಯಿಗಳ ಮನಸ್ಸು – ನಾನು ಯಾವ ಶಿಕಾರಿಗೆ ಹಾತೊರೆಯುತ್ತಿರುವೆನೆಂಬುದನ್ನು ಆ ಕುತ್ತ ಕಂಡುಕೊಂಡು ಸಾವಂತ್ರಿಯತ್ತ ಕರೆದೊಯ್ತು"

—ಎಂದು ಹೇಳಿ ಮತ್ತೆರಡು ಪಕೋಡ ಕಚಪಚನೆ ಅಗಿದು ನೀರು ಕುಡಿದರು. ಮತ್ತೆ ಅವರೇ ಹೇಳಿದರು—

"ಒಂದೊಂದುಸಲ ನಾಯಿ ಬುದ್ಧಿ ತೆಗೆದುಬಿಡುತ್ವೆ – ಈ ನಾಯಿಗಳು ಖೂನಿ-ದರೋಡೆ ಮಾಡಿದವರನ್ನ ಕಂಡುಹಿಡೀತವೆ ಅನ್ನೋದು ಸ್ಕಾಟ್‌ಲೆಂಡ್‌ಯಾರ್ಡಿನವರಿಗೆ ಮುಂಚೆ ನಾನು ಬಾಗೂರಿನಲ್ಲೆ ಕಂಡುಹಿಡಿದೆ. ಟಿಪ್ಪು ಕಡಿಮೆಯವನಲ್ಲ. ಕಳುವು ಕನ್ನ ಜಾಸ್ತಿಯಾಗಿ ನನಗೆ ಕಳ್ಳರನ್ನು ಹಿಡಿಯಲೂ ಬೇಜಾರು ಆದಾಗ ನನ್ನ ಟಿಪ್ಪುವೇ ಹೋಗಿ ಹಿಡಿದು ತಂದು ನನ್ನ ಮುಂದೆ ನಿಲ್ಲಿಸುವುದು. ಒಂದುಸಲ ಹಗಾಹಗಲು ಕನ್ನೇಶ್ವರಿ ಭೀಮು ಖೂನಿಮಾಡಿ ಇಡೀ ತಾಲ್ಲೋಕು ಜಿಲ್ಲೆಯನ್ನೇ ಕಲ್ಲೋಲಮಾಡಿದ ಸೂಪ್ರೆಂಟ್ರು ನನ್ನ ನಾಯಿಗೇ ಗಂಟು ಬಿದ್ದರು. ಖಂಡಿತ ಈ ಕೇಸಿನಲ್ಲಿ ನಾನು ಸಬ್ಬಿನಿಸ್ಪೆಕ್ಟರಾಗೇ ಬಿಡುವೆನೆಂದು ತಿಳಿದಿದ್ದೆ. ಆದರೆ ನಾಯಿ ಮನುಷ್ಯರ ಬುದ್ಧಿ ತೋರಿಸಿತು. ಖೂನಿಯಾದ ಮನೆ ತೋರಿಸಿ—ಆಚೆ ಈಚೆ ನಾನು—ಲೇವಣ್ಣಿ ಸಿದ್ರಾಮು ಸೂಪ್ರೆಂಟ್ರೂ ಮುಂದೆ ಟಿಪ್ಪು ಹೊರಟೆವು. ನನ್ನ ನಾಯಿ ಟಿಪ್ಪು ಅಗಲೇ ನನ್ನನ್ನು ಧೈರ್ಯದ ದೃಷ್ಟಿಯಿಂದ ನೋಡಿ ಹೊರಟಿತ್ತು. ಆಗಲೇ ನಾನು ಸಬ್ಬಿನಿಸ್ಪೆಕ್ಟರಂತೆ ಎದೆ ಉಬ್ಬಿಸಿ ಹೊರಟಿದ್ದೆ. ಖೂನಿಮಾಡಿದ ಖದೀಮನನ್ನು ಹುಡುಕುವ ಧೀರನಂತೆ ಅತ್ತ ಇತ್ತ ಇತ್ತ ಸುತ್ತಿ ಮೂಸಿ ತಿರುಗಿ—ನನ್ನ ನೋಡಿ ಗಲ್ಲಿ ಬಿದ್ದ ಗುಂಡಿ ದಾಟಿ—ಅಗಳ್ತೆ ಇಳಿದು ಬೆಟ್ಟಾ ಹತ್ತಿ ಕಂಬಿ ದಾಟಿ—ಕಡೆಗೆ ಒಂದು ಪೊದೆ ಹತ್ತಿರ ನಿಂತಿತು—ನಾನು ಬಂದೂಕು ಸರಿಮಾಡಿದೆ. ಕಳ್ಳ ಸಿಕ್ಕನೆಂದು ಸೂಪ್ರೆಂಟ್ರೂ ಬೆಲ್ಟು ಸರಿಮಾಡಿಕೊಂಡರು — ನನ್ನನ್ನೊಮ್ಮೆ ನಾಯಿ ನೋಡಿ ನಸುನಕ್ಕು ಹೆಮ್ಮೆಯಿಂದ ಪೊದೆ ಹೊಕ್ಕಿತು. ಹೊರಗೆ ಬರಲೇ ಇಲ್ಲ—ಬೊಗಳಲೇ ಇಲ್ಲ—ಅದು ಬೊಗಳುವ ನಾಯಿಯೂ ಅಲ್ಲ—ದೃಢವಾಗಿ ಹೆಜ್ಜೆಮೇಲೆ ಹೆಜ್ಜೆ ಇಟ್ಟ ಸೂಪ್ರೆಂಟು ಹಿಂದೆ ನಾನು ಮುಂದೆ—ಆ ಪೊದೆಯನ್ನು ಹೊಕ್ಕೆವು—ಸೂಪ್ರೆಂಟರು ಹೊರಗಿಬಿದ್ದರು — ಅಲ್ಲಿ ನಿಂತಿತ್ತು ಟಿಪ್ಪುವಿನ ಹೆಂಗೆಳತಿ ಹೆಣ್ಣು ನಾಯಿ ..."

"ಹ ಹ ಹ ಹ...."

"ಅದಕ್ಕೇ ಅದನ್ನ ಗುಂಡಿಕ್ಕಿ ಕೊಂದು ಈ ಕುನ್ನಿ ತರಪೇತಿಗೆ ನಿಂತೆ"

—ಎಂದು ಹೇಳಿ ಹಾಗೇ ಒರಗಿದರು. ದ|| ದೇಗೆ ನಿದ್ರೆಯಾವರಿಸಿತು.

— ದಾಶರಥಿ ದೀಕ್ಷಿತ್.

---

# ರಾಜೀವಪುರದ ನಗರ ರಕ್ಷಕರ ಎದೆಗಾರಿಕೆ!

ಶ್ಯಾಮಾ ಗೌಂಡರ್ ಅವರು ರಾಜೀವಪುರಕ್ಕೆ ಹೊಗೇಸೊಪ್ಪುಕೊಂಡು ತಮ್ಮೂರಿಗೆ ಕಳಿಸುವ ವ್ಯಾಪಾರಕ್ಕೆಂದು ಬಂದು ನಾಲ್ಕೇ ವರ್ಷಗಳಲ್ಲಿ, ಊರಿನ ಗಾಂಧೀನಗರದ, ಜವಹರ ಬೀದಿಯ, ಪಟೇಲ್ ಸರ್ಕಲಿನಲ್ಲಿ ಎರಡಂತಸ್ತಿನ ಭರ್ಜರಿ ಮನೆಯನ್ನು ಕಟ್ಟಿದ್ದರು. ಮನೆಯ ಮುಂದೆ ಲಕ್ಷಣವಾದ ಹೂದೋಟ ಹಾಕಿದ್ದರು. ಅದನ್ನು ತಾವೇ ಬೆಳಸಿ ಆರೈಕೆಮಾಡುತ್ತಿದ್ದರು.

"ಹೆಚ್ಚು ಆಹಾರ ಬೆಳೆಯಿರಿ" — "ಕ್ರೋಟನಿಗಿಂತ ಕೋಸೇ ಲೇಸು"— "ಮಲ್ಲಿಗೆಗಿಂತ ಮೂಲಂಗಿ ಚೆನ್ನು"—"ಉಳ್ಳಾಗಡ್ಡೆಯ ಮುಂದೆ ರೋಜಾಹೂವೆ"— ಇತ್ಯಾದಿ ಕೇಂದ್ರ ಸರ್ಕಾರದ ಘೋಷಣೆಯನ್ನು ಕೇಳಿ, ಓದಿ, ಶ್ಯಾಮಾ ಗೌಂಡರು ತಮ್ಮ ಹೂದೋಟದಲ್ಲಿ ತರಕಾರಿ ಗಿಡಗಳನ್ನು ಚಿತ್ರ ಬರೆದಂತೆ ಬೆಳೆಸಲು ಮನಸ್ಸು ಮಾಡಿದರು. ಅದೇ ರೀತಿ ತೋಟವನ್ನೂ ಬೆಳೆಸಿದರು. ಏರಡೂ ಪಕ್ಕದಲ್ಲಿ ಹೊನಗೊನೆ ಸೊಪ್ಪಿನ ಪಾತಿಗಳು, ತಲೆಯ ಕಡೆ ಬದನೆಕಾಯಿ ಗಿಡದ ಪಾತಿ. ಮಧ್ಯದಲ್ಲಿ ಪದಕವಿಟ್ಟಂತೆ ಈರುಳ್ಳಿ ಗಿಡ. ಅದರ ಇಕ್ಕೆಡೆಗಳಲ್ಲಿ ಮುಲ್ಲಂಗಿ ಗಿಡ. ತಳದಲ್ಲಿ ಕುಂಬಳದ ಬಳ್ಳಿ ಹಬ್ಬಿಸಿದ್ದರು.

ಆದರೆ ಪಾಪ! ಒಂದು ದಿನವಾದರೂ ಆತ ಆ ತರಕಾರಿಯ ಬೆಳೆಯನ್ನು ಅನುಭವಿಸಿದ್ದಿಲ್ಲ. ಯಾರೋ ಯಾವುದೋ ರಾತ್ರಿಯಲ್ಲಿ ಫಲಕ್ಕೆ ಬಂದ ತರಕಾರಿ ಯನ್ನು ಕದ್ದೇಬಿಡುತ್ತಿದ್ದರು. ಇಷ್ಟಾಗಿ ಮನೆಯಲ್ಲಿ ಮದರಾಸಿನಿಂದ ತರಿಸಿದ ಬೇಟೆನಾಯಿಗಳನ್ನಿಟ್ಟಿದ್ದರು. ರಾತ್ರಿಯ ಹೊತ್ತು "ಬೀಟ್"ಮಾಡಲು ನಗರ ರಕ್ಷಕರು ಬರುತ್ತಿದ್ದರು ಆದರೂ ತಾನು ಬೆಳೆದ ತರಕಾರಿಯನ್ನು ತಾನು ತಿನ್ನಲು ಇನ್ನೂ ಸಾಧ್ಯವಾಗಿತ್ತಿಲ್ಲ. ತರಕಾರಿಯನ್ನು ಹೊಂಚುಹಾಕಿ ಹೊಡೆಯುತ್ತಿದ್ದ ಮಾಸ್ಸಿಂಗ್ ಯಾರು ಎಂದೇ ಚಿಂತಾಕ್ರಾಂತನಾಗಿದ್ದರು ಶ್ಯಾಮಾ ಗೌಂಡರ್. ಸ್ಕಾಟ್ಲೆಂಡ್ ಯಾರ್ಡಿಗೆ ಬರೆದು ವಿಶೇಷ ಪತ್ತೇದಾರನನ್ನು ತರಿಸಲೇ ಎಂದು ಯೋಚಿಸುತ್ತಿದ್ದರು ಗೌಂಡರ್.

ಒಂದು ದಿನ ಬೆಳಿಗ್ಗೆ ಸುಮಾರು ನೂರು ರೂಪಾಯಿ ನಫೆ ಬರುವ ವ್ಯಾಪಾರ ಮಾಡಿದ ಮೇಲೆ ಶ್ಯಾಮಾಗೌಂಡರು ಹಸನ್ಮುಖಿಗಳಾಗಿ ಬೇಟೆನಾಯಿ ಜೋಡಿಯನ್ನು ಆದರಿಸುತ್ತಾ ತಮ್ಮ ವರಾಂಡದಲ್ಲಿ ಕುಳಿತಿದ್ದರು.

ನಗರ ರಕ್ಷಕ ಬಂದ. ನಿಮಿರಿನಿಂತು ಸಲಾಂ ಹಾಕಿದ. ಬೇಟೆ ನಾಯಿ ಗಳೆರಡೂ ಬಾಲ ಅಲ್ಲಾಡಿಸುತ್ತಾ ಬಾಯಿನ ಹೊರಗೆ ನಾಲಿಗೆ ಚಾಚಿ ನಸುನಕ್ಕುವು.

"ಗೌಂಡರೇ" ಎಂದ ಬಂದ ನಗರ ರಕ್ಷಕ.

"ಮುಂದಿನ ತಿಂಗಳು ನಮ್ಮನೆಗೆ ಅಳಿಯ ಮಗಳು ಆಸಾಂನಿಂದ ಬರುತ್ತಾರೆ. ಎಂಟೇ ದಿನ ಇರುತ್ತಾರೆ. ಅವರಿಗೆ ಬಟಾಣಿ ಎಂದರೆ ಬಲು ಪ್ರೀತಿ. ದಯವಿಟ್ಟು ನಿಮ್ಮಲ್ಲಿ ನನ್ನದೊಂದು ಬೇಡಿಕೆ. ನೀವು ನಿಮ್ಮ ಬಂಗಲೆ ತೋಟದಲ್ಲಿ ಬಟಾಣಿ ಬೆಳಿಸಬೇಕು ನನ್ನ ಅಳಿಯ ಮಗಳು ಊರಿನಲ್ಲಿರುವ ತನಕ ನಿಮ್ಮ ಚಿರಋಣಿ ಯಾಗಿರುತ್ತೇನೆ ಇಷ್ಟುಮಾತ್ರ ಮಾಡಿಕೊಡಲೇಬೇಕು" ಎಂದ.

ನಗರ ರಕ್ಷಕನ ಎದೆಗಾರಿಕೆಯನ್ನು ಕಂಡು ಶ್ಯಾಮಾಗೌಂಡರು ಸುಸ್ತಾದರು.

ಈಗ ಬಂಗಲೆಯಲ್ಲಿ ಬರೀ ಲಂಟಾಣಾ ಬೆಳೆಸಿದ್ದಾರೆ ಶ್ಯಾಮಾಗೌಂಡರು. ನಗರ ರಕ್ಷಕ ದಳಕ್ಕೆ ಅವರೂ ಸೇರಿ ಈಗ ರಾತ್ರಿ ಒಂದೆರಡು ತಾಸು, ಸಮಾಜ ಸೇವೆ ಮಾಡುತ್ತಿದ್ದಾರೆ. ವಿಧವಿಧವಾದ ತರಕಾರಿಯನ್ನು ಈಗ ದಿನಾಲೂ ಮನೆಯಲ್ಲಿ ಅಡಿಗೆ ಮಾಡಿಸುತ್ತಿದ್ದಾರೆ. ಮಾಡಿಸಿ ಕಂಠಪೂರ್ತಿ ಹೊಡೆಯುತ್ತಲೂ ಇದ್ದಾರೆ.

ಹೇಗೂ ರಾಜೀವಪುರ ದೇವತೆಗಳಿರುವ ಊರಲ್ಲವೇ!!

—ಕುಮಾರ್.



ಈ ಸಾರಿ ಕುದುರೆ ಜೂಜು ನಿಲ್ಲಿಸಿದ್ದರೇ ಚೆನ್ನಾಗಿತ್ತು ಅನ್ನಿಸುತ್ತೆ!!

# ಬರೀ ಮೋಸ!

ನಮ್ಮೂರಿಗೆ ಜರ್ಮನಿಯಲ್ಲಿ ಪ್ರಸಿದ್ಧನಾಗಿದ್ದ ದಂತವೈದ್ಯನೊಬ್ಬ ಬಂದು ತನ್ನ ದಂತ ಚಿಕಿತ್ಸಾಲಯವನ್ನು ಶುರುಮಾಡಿದ. ತೊದಲು ಕನ್ನಡ ಕಲಿತಿದ್ದಾತ, ತನ್ನ ದವಾಖಾನೆಯನ್ನು ಜರ್ಮನಿ ರೀತಿಯಲ್ಲೇ ಶೃಂಗರಿಸಿದ್ದ. ಕಿಟಕಿಗಳಿಗೆಲ್ಲಾ ರಂಗಿನ ಬಟ್ಟೆಯ ಪರದೆಯನ್ನು ಹಾಕಿದ್ದ. ಆ ಬಟ್ಟೆ ನಮ್ಮ ಚಿಕ್ಕಿಯ ಹಳೇ ಸೀರೆಯ ತುಂಡೋ ಎಂದೆನಿಸಿದರೂ ಕಂಡವರು ಏನು ಚಂದ ಎಂದು ಚಪ್ಪರಿಸುತ್ತಿದ್ದರು. ಬಾಗಿಲಿಗೆಲ್ಲಾ ಕೆಮ್ಮಣ್ಣನ್ನೇ ಸವರಿದ್ದನಾದರೂ ಎಲ್ಲರೂ ಜರ್ಮನಿ ಬಣ್ಣ, ಗ್ಯಾರಂಟಿ ಮಾಲು, ಎಷ್ಟು ಅಂದ ಎಂದೇ ಅಂದಿದ್ದರು.

ಇದನ್ನೆಲ್ಲಾ ಕೇಳಿದುದರಿಂದಲೇ ನಾನು ಆತನಲ್ಲಿಗೆ ಹೋದೆ, ನನ್ನ ಕೋರೆ ಹಲ್ಲು ಅಗಿಯುವಾಗ ಓರೆ ಕೋರೆಯಾದ ಕಾರಣದಿಂದ, ಹಾಗೂ ಅಗಿಯುವಾಗ ನೋವನ್ನು ಕೊಡುತ್ತಿದ್ದ ಕಾರಣ.

ಅಂಗೈ ಹುಣ್ಣಿಗೆ ಕನ್ನಡಿ ಬೇಕೆ ಎಂದು ಗಾದೆ ಇರಬಹುದು. ಆದರೆ ಆ ದಂತ ವೈದ್ಯ ಕನ್ನಡವನ್ನು ಅಷ್ಟು ಕಲಿತಿರಲಿಲ್ಲ. ತನ್ನ ಕಣ್ಣೆದುರಿಗಿದ್ದ, ನನ್ನ ಬಾಯಲ್ಲಿದ್ದ ಹಲ್ಲನ್ನು ನೋಡಲು ಕನ್ನಡಿ ಉಪಯೋಗಿಸಿದ. ಅದೇ ಕನ್ನಡಿಯಿಂದ ಆ ಕೋರೆ ಹಲ್ಲನ್ನು ಕುಟ್ಟಿದ. ನಾನು "ಬೋಲ ಬೋಲ" ಮಾಡುವ ಮುಖಮಾಡಿದೆ.

"ಆಹಾ!" ಎಂದ ಆತ. "ಹ್ಞೂ ಹ್ಞೂ" ಎಂದು ಹೂಂಕರಿಸಿದ ಆತ. "ಇದರಿಂದಲೇ ನಿಮಗೆ ತ್ರಾಸು" ಎಂದ. ಆ ಭಡವನಿಗೆ ಗೊತ್ತು ಅಖಂಡ ಕರ್ಣಾಟಕ ಸನ್ನಿಹಿತವಾಗಿದೆ ಎಂದು. ಅದಕ್ಕೇ ತ್ರಾಸು ಎಂದಿದ್ದ.

ದೇಶಾವರದ ನಗೆಯನ್ನು, ಬಾಯಲ್ಲಿ ಕನ್ನಡಿ ಇಟ್ಟುಕೊಂಡು ಯಾವ ರೀತಿ ನಗಬಹುದೋ ಆ ರೀತಿ ನಕ್ಕೆ.

ಅರ್ಜುನನಿಗೆ ಶ್ರೀಕೃಷ್ಣಪರಮಾತ್ಮನು ಆಣತಿ ಇತ್ತ ರೀತಿಯಲ್ಲಿ, ಗೋವಿನ ಕತೆಯ ಪುಣ್ಯಕೋಟಿಯು ಹುಲಿಗೆ ಹೇಳಿದ ಮಾತುಗಳಲ್ಲಿ ಆತ ನನಗೆ ಹೇಳಿದ. "ಈ ಹಲ್ಲಿನ ಫೋಟೋ ಹಿಡಿಸಬೇಕು. ಇಂತಹವರ ಹತ್ತಿರವೇ ಹಿಡಿಸಬೇಕು. ಅದನ್ನು ಹಿಡಿಸಿ ತೆಗೆದುಕೊಂಡು ಬರ್ರೀ" ಎಂದು. ನನಗೆ ಸ್ವಲ್ಪ ಖುಷಿಯಾಯ್ತು. ನನ್ನ ಹಲ್ಲುಗಳು ನನಗೆ ಬಲು ಪ್ರಿಯ. ನಾಲ್ವತ್ತು ವರ್ಷಗಳಿಂದ ಗೋಕುಲಾಷ್ಟಮಿ

ಉಂಡೆಗಳನ್ನು ಅದು ಅಗಿದಿದೆ. ಮೂವತ್ತು ಬಾರಿ ಅತ್ತೆಯ ಮೇಲೆ ಕೋಪ ಬಂದಾಗ, ಆಕೆಗೆ ಕೇಳಿಸುವಂತೆ ಕಟಕಟ ಕಡಿದಿದೆ. ಸ್ವಲ್ಪ ತುಟಿ ಮೀರಿರಬಹುದು. ಆದರೂ ಕೂಡಿದವರಿಗೆ ಕೋಡಗ ಮುತ್ತಿಡುವುದಿಲ್ಲವೇ? ಇಂತಹ ಹಲ್ಲುಗಳ ಫೋಟೋ ಹಿಡಿಸಬೇಕು ಎಂದು ಈತ ಸಲಹೆ ಮಾಡಿದಾಗ, ನನ್ನ ಹಲ್ಲುಗಳೂ ಪರವಾಗಿಲ್ಲ! ರಾಜಕಾರಣ ನಾಯಕರಂತೆ, ಪ್ರಜಾಪ್ರತಿನಿಧಿಗಳಂತೆ, ಮದರಾಸಿನ ಸುಪ್ರಸಿದ್ಧ ವಾಸನಾಶಾಸ್ತ್ರಿ ಶುನಕಗಳಂತೆ, ನನ್ನ ಹಲ್ಲುಗಳೂ ಫೋಟೋ ಹಿಡಿಸಿ ಕೊಂಡು ಮೆರೆಯುತ್ತಲ್ಲಾ ಎಂದು ಹಿಗ್ಗಿದೆ.

ಜರ್ಮನಿಯಾತ ಬರೆದುಕೊಟ್ಟವನ ಫೋಟೋ ದುಖಾನಿಗೆ ಹೋದೆ. ಅದೂ ಇವನ ದವಾಖಾನೆಯ ರೀತಿಯೇ ಶೃಂಗಾರಮಾಡಲ್ಪಟ್ಟಿತ್ತು. ಅಲ್ಲಿದ್ದಾತ "ದಂತ ವೈದ್ಯರು ಸೂಚಿಸಿರುವ ಹಲ್ಲುಮಾತ್ರ ಫೋಟೋ ಹಿಡಿಯಲೋ, ಅಥವಾ ಬಾಯಿನಲ್ಲಿ ಉಳಿದಿರುವ ಎಲ್ಲಾ ಹಲ್ಲುಗಳ ಫೋಟೋ ಹಿಡಿಯಲೋ" ಎಂದ.

ಈಗಿನ ಸಮತಾ ಸಮಾಜದ ಯುಗದಲ್ಲಿ ಕೋರೆಹಲ್ಲಿಗೂ ಬಾಚಿ ಹಲ್ಲಿಗೂ ಭೇದಮಾಡಲು ನಾನ್ಯಾರು? ಹಾಗೂ ಎರಡೂ ನನ್ನವೇ ಅಂದಮೇಲೆ ಒಂದು ಮಂತ್ರಿಗೆ ಸುಣ್ಣ, ಒಂದು ಮಂತ್ರಿಗೆ ಬೆಣ್ಣೆ ಹಚ್ಚಿದರೆ ಬಾಳುವುದಾದರೂ ಹೇಗೆ? ಎಂದಂದುಕೊಂಡು, ತೀರ್ಮಾನ ಹೇಳಿದೆ. ಬಾಯಲ್ಲಿರುವ ಎಲ್ಲ ಹಲ್ಲುಗಳ ಅಂದರೆ, ಆರು ಹಲ್ಲುಗಳ ಫೋಟೋ ಹಿಡಿಯಿರಿ. ಅವು ಕೂತಂತೆ, ಎದುರಿನಿಂದ, ಪಕ್ಕದಿಂದ, ಮೇಲಿಂದ ಮೂರು ಮೂರು ಫೋಟೋ ಹಿಡಿಯಿರಿ. ಒಂದು ದಂತ ವೈದ್ಯನಿಗೆ, ಒಂದು ವರ್ತಮಾನ ಪತ್ರಿಕೆಗಳಿಗೆ, ಒಂದು ನಮ್ಮ ಅತ್ತೆಯ ಮನೆಯ ಶೃಂಗಾರಕ್ಕೆ ಎಂದು ಹೇಳಿದೆ.

ಆತ ನಸುನಗುತ್ತಾ ಅದೇ ರೀತಿ ಮಾಡಿದ "ಸಾಯಂಕಾಲ ಬನ್ನಿ! ಫೋಟೋ ಪ್ರತಿಗಳನ್ನು ಸಿದ್ಧಗೊಳಿಸಿರುತ್ತೇನೆ" ಎಂದ. ಸಾಯಂಕಾಲ ಹೋದಾಗ ಎರಡು ಅಂದದ ಲಕೋಟೆಗಳನ್ನು ನನ್ನ ಕೈಯಲ್ಲಿರಿಸಿದ. ಒಂದರಲ್ಲಿ ಫೋಟೋ ಗಳಿದ್ದುವು. ಒಂದರಲ್ಲಿ ಅದಕ್ಕಾದ ಖರ್ಚಿನ ಬಿಲ್ಲಿದ್ದಿತು.

ಆ ಬಿಲ್ಲನ್ನು ನೋಡಿ ಎದೆ ಹಾರಿತು. ಆದರೆ ಜರ್ಮನಿಯ ಫೋಟೋ ಹಿಡಿಯುವನ ನೋಡಿ ನಕ್ಕಾನೋ ಎಂಬ ಭಯದಿಂದ, ವರ್ಷದ ಮೇಲ್ಸಂಪಾದನೆ ಯನ್ನು ಅವನ ಬುತ್ತಿಗೆ ಹಾಕಿದೆ.

ರಸ್ತೆಗೆ ಹಿಂತಿರುಗಿದಾಗ್ಯ ಅವನು ನೋಡಲಾರ ಎಂದು ಖಂಡಿತವಾದಾಗ ಆ ಫೋಟೋಗಳನ್ನು ನಾನು ತೆಗೆದು ನೋಡಿದೆ. ಕನ್ನಡಿ ಮುಂದೆ ಹಿಗ್ಗಿ ನಕ್ಕಾಗ ನನ್ನ ಉಳಿದ ಹಲ್ಲುಗಳೆನ್ನು ನಾನು ನೋಡಿದ್ದೇನೆ. ಜಂಭವಿಲ್ಲದೇ ಹೇಳುತ್ತೇನೆ, ದಿಟವಾಗಲೂ ಚೆನ್ನಾಗಿವೆ. ಆದರೆ ಈ ಫೋಟೋಗಳಲ್ಲಿ ನೋಡಿದರೆ, ಶುದ್ಧ

ಆಭಾಸ. ದೆವ್ವ ಬಡಿದಂತೆ ನಿಂತಿವೆ. ಕೋರೆ ಹಲ್ಲುಗಳು ನೋಡುಕ್ಕೇನೋ ಚಂದ. ಆದರೆ ಒಳಗೆಲ್ಲಾ ಟೊಳ್ಳು. ಇದಕ್ಕೇನೆ ನಾನು ವರ್ಷದ ಮೇಲ್ಸಂಪಾದನೆಯನ್ನು, ಗೌರೀಹಬ್ಬದ ಸೀರೆಯ ಬೆಲೆಯನ್ನು, ತೆತ್ತಿದ್ದು ಎಂದು ಯೋಚಿಸಿ ಹಲ್ಲು ಕಡಿದೆ.

ಕೋರೇ ಹಲ್ಲು ಬಾಚಿಹಲ್ಲನ್ನು ಆಲಂಗಿಸಿತು. ತಿರುಗಿ ಬಿಡಿಸಿಕೊಂಡಿತು. ಆ ಗಲಾಟೆಯಲ್ಲಿ ಕೋರೆಹಲ್ಲು ಮನೆತಪ್ಪಿತು. ಬಾಯಿ ತುಂಬಿತು. ಉಗುಳಿದೆ. ಹಲ್ಲು ಬಾಯಿ ಹೊರಗಾಯ್ತು. ರಕ್ತ ಉಗುಳಿದೆ. ಆದರೂ ನೋವು ನಿಂತಿತು.

ತಿರುಗಿ ಜರ್ಮನಿ ದಂತವೈದ್ಯನ ಬಳಿಗೆ ಹೋಗಲಿಲ್ಲ. ಬಾಯಿ ಮುಚ್ಚಿಕೊಂಡು ಮನೆಗೆ ಹಿಂತಿರುಗಿದೆ. ಇನ್ನು ಮೇಲೆ ಮನೆಯವರ ಮೇಲೆ ರೇಗಿದಾಗ ಹಲ್ಲು ಕಡಿಯುವಂತೆಯೂ ಇಲ್ಲ. ಅಂದ ಮೇಲೆ ಸಂಸಾರವಂದಿಗನಂತೆ, ಗಾಣದ ಎತ್ತಿನಂತೆ, ಬಾಳ ಸಾಗಿಸಲೇಬೇಕು.

—ಏನು ಮೋಸ! ಅಂತೀರಿ! ಬರೀ ಮೋಸ!! ಈ ದಂತ ವೈದ್ಯರು!!

—ಕುಮಾರ್.




ಶ್ರೀ ದೇಬರ್‌ರಿಂದ ಬಂದಿದೆಯನ್ನೇ —ಒಪ್ಪಿಗೆ ಕಾಗದ!!










**ಶಾಲಿಮಾರ್** ವುಡ್‌ಕೋಟ್

**ರೆಡಿಮಿಕ್ಸ್ಡ ಪೆಯಿಂಟ್**
ಒಳ್ಳೇ ಹೊಳಪಿರುವ, ಬಹಳ ಬಾಳಿಕೆಯುಳ್ಳ ರೆಡಿಮಿಕ್ಸ್ಡ ಬಣ್ಣ

**ಶಾಲಿಮಾರ್** ಲಸ್ಟಾಲ್

**ಅಲ್ಯೂಮಿನಿಯಂ ಪೆಯಿಂಟ್**
ವಿಸ್ತಾರ ಮೇಲ್ಮೈ ಪ್ರಸರಣ ಶಕ್ತಿಯುಳ್ಳದ್ದು

**ಶಾಲಿಮಾರ್** ಮ್ಯಾಟ್‌ಕೋಟ್

**ಫ್ಲ್ಯಾಟ್ ವಾಲ್ ಪೆಯಿಂಟ್**
ಒಳಭಾಗದ ಗಾರೆ, ಕಾಂಕ್ರೀಟು, ಮತ್ತು ಮರಕ್ಕೆ ಹಿಡಿಯುವುದು. ಬಾಳಿಕೆವುಳ್ಳದ್ದು.

**ಅತ್ಯುತ್ತಮವಾದ ಸಕಲಕಾರ್ಯಗಳಿಗೂ ಉಪಯೋಗಿಸಬಹುದಾದ ಎನಾಮೆಲ್**
ಅನೇಕ ತರದ ಕೈಗಾರಿಕೆ ಮತ್ತು ಮನೆಕೆಲಸಗಳಿಗೆ ಉಪಯೋಗಕ್ಕೆ ಕೀಳಾವುದಲ್ಲದೆ
ಯಾವುದರಮೇಲೂ ಬಳಿಯಬಹುದು. ಬ್ರಷ್ಷಿನಿಂದ ಬಳಿಯಬಹುದು,
ಸ್ಪ್ರೇ ಮಾಡಬಹುದು ಅಥವಾ ಬಣ್ಣದಲ್ಲಿ ಅದ್ದಲೂಬಹುದು;
ಆಗಿಂದಾಗ್ಗೆ ತೊಳೆದರೂ ಬಣ್ಣ ನಿಲ್ಲುವುದು
**ಶಾಲಿಮಾರ್ ಸೂಪರ್‌ಲ್ಯಾಕ್**







**SHALIMAR PAINT, COLOUR & VARNISH CO., LTD.,**
**"Karim Manzil", Kumbargundi Road, Bangalore City-2.**
**Telephone No. 3607**

SPW 326